# ಒಂದು ಸಂದೇಶ

ಹಿಂದ್‌ಸ್ವರಾಜ್ಯ ಯಾವ ತತ್ವಗಳ ಸಮರ್ಥನೆಗಾಗಿ ರಚಿತವಾಯಿತೋ ಅದನ್ನು ನೀವು ಪ್ರಚಾರ ಮಾಡುವುದಕ್ಕೆ ನನ್ನ ಸ್ವಾಗತ. ಇದರ ಮೂಲ ಗುಜರಾತಿ. ಇಂಗ್ಲಿಷು ಅದರ ಭಾಷಾಂತರ. ಈಗ ಈ ಪುಸ್ತಕ ಬರೆಯುವದಿದ್ದರೆ, ಅಲ್ಲಿ ಇಲ್ಲಿ ಭಾಷೆಯನ್ನು ಬದಲಿಸಿಯೇನು. ಈ ಮೂವತ್ತು ವರ್ಷ ಬಿರುಗಾಳಿಯಲ್ಲಿ ಸಾಗಿ ಬಂದಿದೆ ನನ್ನ ಬದುಕು. ಆದರೂ ಇದರಲ್ಲಿ ವಿವರಿಸಿರುವ ಅಭಿಪ್ರಾಯಗಳನ್ನು ತಿದ್ದಿಕೊಳ್ಳುವಂಥದೇನೂ ನನಗೆ ಕಂಡಿಲ್ಲ. ಇದು ನನಗೂ ಕೆಲಸಗಾರರಿಗೂ ನಡೆದ ಚರ್ಚೆಯ ಪ್ರಾಮಾಣಿಕ ವರದಿ ಎಂಬುದು ಓದುಗರಿಗೆ ನೆನಪಿರಲಿ. ಆ ಕೆಲಸಗಾರರಲ್ಲಿ ಒಬ್ಬ ಅ-ರಾಜ್ಯವಾದಿ. ದಕ್ಷಿಣ ಆಫ್ರಿಕಾದ ಭಾರತೀಯರಲ್ಲಿ ಕೆಲವರಲ್ಲಿ ಮೊದಲಾಗಿದ್ದ ಭ್ರಷ್ಟತೆಯನ್ನು ಇದು ನಿಲ್ಲಿಸಿತೆಂಬುದೂ ಓದುಗರಿಗೆ ನೆನಪಿರಲಿ. ಇದರ ಜೊತೆಗೆ ಈಗ ಕಣ್ಮರೆಯಾಗಿರುವ ಗೆಳೆಯನೊಬ್ಬ ಹೇಳಿದ 'ಇವೆಲ್ಲ ಬರಿ ಪಿತ್ತ' ಎಂಬ ಅಭಿಪ್ರಾಯವನ್ನೂ ಓದುಗರು ತೂಗಿ ನೋಡಲಿ.[1]

ಸೇಗಾಂವ

14 ಜುಲೈ 1938

*ಮೋ. ಕ. ಗಾಂಧಿ*

---

1. 'ಆರ್ಯನ್ ಪಾತ್ ಹಿಂದ್ ಸ್ವರಾಜ್ಯ ವಿಶೇಷಾಂಕ'ದಿಂದ ಎತ್ತಿಕೊಂಡದ್ದು. ಪ್ರಕಟಣೆ ಸೆಪ್ಟೆಂಬರ್ 1938.

# ಮುನ್ನುಡಿ

**ಯಂತ್ರ ಮತ್ತು ನಾಗರಿಕತೆಗೆ ವಿರೋಧ**

ಗಾಂಧೀಜಿಯ ಬಗ್ಗೆ ಬಂದಿರುವ ಎಲ್ಲಾ ವಿಮರ್ಶೆಗಳಲ್ಲೂ ಒಂದು ಮಾತು ಸಾಮಾನ್ಯವಾಗಿ ಕಾಣುತ್ತದೆ. ಮಿಡಲ್‌ಟನ್ ಮರ್‍ರೆ ಹೇಳುತ್ತಾರೆ. 'ತಮ್ಮ ದರ್ಶನದ ತೀವ್ರತೆ – ಆತುರಗಳಲ್ಲಿ ತಾವು ಅಷ್ಟು ಒಲಿದ ರಾಟೆಯೂ ಒಂದು ಯಂತ್ರ, ಅದರಿಂದ ಅಸಹಜ ಎಂಬುದನ್ನು ಗಾಂಧೀಜಿ ಮರೆಯುತ್ತಾರೆ. ಅವರ ತತ್ವದ ಪ್ರಕಾರ ಅದನ್ನೂ ಬಿಟ್ಟುಬಿಡಬೇಕು.' ಪ್ರೊ. ಡೈಲೈಲ್ ಬರ್ನ್ಸ್ – 'ಇದೊಂದು ಮೂಲಭೂತ ತಾತ್ವಿಕ ದೋಷ. ದುರುಪಯೋಗಪಡಿಸಬಹುದಾದ ಎಲ್ಲ ಉಪಕರಣವೂ ನೀತಿ–ದುಷ್ಟ ಎನ್ನಬೇಕಾದೀತು. ಹಾಗಾದರೆ ನೂಲುವ ರಾಟೆಯೂ ಯಂತ್ರವಲ್ಲವೆ? ಮೂಗಿನ ಮೇಲೇರಿಸುವ ಕನ್ನಡಕ ಕಣ್ಣಿಗೊಂದು ಯಂತ್ರವಲ್ಲವೆ? ನೇಗಿಲೇ ಒಂದು ಯಂತ್ರ, ಆಳದಿಂದ ನೀರೆತ್ತಲು ಮನುಷ್ಯ ಮಾಡಿದ ಎಲ್ಲ ಯಂತ್ರವೂ ಹತ್ತಾರು ಸಾವಿರ ವರ್ಷ ಕಾಲ ಮಾನವ ಜೀವನವನ್ನು ಉತ್ತಮಗೊಳಿಸಲು ಮಾಡಿದ ಸತತ ಪ್ರಯತ್ನದ ಅಂತಿಮ ಪರಿಣಾಮ... ಯಾವ ಯಂತ್ರವನ್ನು ಬೇಕಾದರೂ ದುರುಪಯೋಗಿಸಬಹುದು. ಆ ನೈತಿಕ ದುಷ್ಟತನ ಬಳಸುವ ಮನುಷ್ಯನದು: ಯಂತ್ರದ್ದಲ್ಲ' – ಎನ್ನುತ್ತಾರೆ.

ನಿಜ. 'ತಮ್ಮ ದರ್ಶನದ ತೀವ್ರತೆ–ಆತುರಗಳಲ್ಲಿ' ಗಾಂಧೀಜಿ ಯಂತ್ರದ ಬಗ್ಗೆ ಅಶುದ್ಧ ಭಾಷೆಯನ್ನು ಬಳಸಿದ್ದಾರೆ. ಈಗ ಮತ್ತೆ ಕೈಯಾಡಿಸಿದರೆ ಅವರೇ ಆ ಶಬ್ದಗಳನ್ನು ಬದಲು ಮಾಡಿಯಾರು. ಮೇಲೆ ಹೇಳಿದ ಈ ವಾಕ್ಯಾರ್ಥವನ್ನು ಗಾಂಧೀಜಿ ಒಪ್ಪುತ್ತಾರೆಂದು ನನಗೆ ನಂಬಿಕೆಯಿದೆ. ಯಂತ್ರವನ್ನು ಬಳಸುವ ಮನುಷ್ಯನ ದುಷ್ಟತನವನ್ನು ಯಂತ್ರಕ್ಕೆ ಕಟ್ಟಿ, ಅದಕ್ಕೆ ನೈತಿಕ ಗುಣವನ್ನು ಗಾಂಧೀಜಿ

ಎಂದೂ ಆರೋಪಿಸಿಲ್ಲ. ಮೇಲೆ ಉದಾಹರಿಸಿರುವ ಲೇಖಕರು ಬಳಸಿದ ಭಾಷೆಯನ್ನೇ ಗಾಂಧೀಜಿ 1924ರಲ್ಲಿ ಬಳಸಿದ್ದಾರೆ. ದಿಲ್ಲಿಯಲ್ಲಿ ನಡೆದ ಸಂಭಾಷಣೆಯೊಂದನ್ನು ಇಲ್ಲಿ ಎತ್ತಿಕೊಡುತ್ತೇನೆ. ಯಂತ್ರವೆಂದರೆ ನಿಮಗೆ ದ್ವೇಷವೇ ಎಂಬ ಪ್ರಶ್ನೆಗೆ ಉತ್ತರ ಕೊಡುತ್ತಾ ಗಾಂಧೀಜಿ ಹೇಳಿದರು:

"ಉಂಟೆ? ಹಾಗೆನ್ನಬಹುದೆ? ನಮ್ಮ ಮೈಯೇ ಒಂದು ಕುಶಲವಾದ ಯಂತ್ರವಲ್ಲವೆ? ರಾಟೆಯೇ ಒಂದು ಯಂತ್ರ, ಹಲ್ಲಿನ ಸಂದಿನೊಳಗೆ ಸೇರಿದ ಕಸ ತೆಗೆವ ಹುಲ್ಲುಕಡ್ಡಿಯೂ ಒಂದು ಯಂತ್ರ, ಯಂತ್ರವನ್ನಲ್ಲ ನಾನು ಬೇಡ ಎನ್ನುವುದು; ಯಂತ್ರ ಯಂತ್ರ ಎಂಬ ಭ್ರಾಂತಿಯನ್ನು. ಶರೀರ ಶ್ರಮವನ್ನು ಕಡಿಮೆ ಮಾಡುವ ಯಂತ್ರ ಬೇಕೆಂಬ ಭ್ರಾಂತಿ ಈಗ ಬೆಳೆಯುತ್ತಿದೆ. 'ದುಡಿತ ಕಡಿಮೆ'ಯಾಗಿ, ಸಾವಿರಾರು ಜನ ಹಸಿವಿನಿಂದ ಸಾಲಾಗಿ ಬೀದಿಯಲ್ಲಿ ಬಿದ್ದಾರು. ಹತ್ತು ಜನಕ್ಕೆ ದುಡಿತ ಕಡಿಮೆ ಮಾಡುವ ಉದ್ದೇಶವಲ್ಲ ನನ್ನದು; ಇಡೀ ಮಾನವ ಕೋಟಿಗೇ ದುಡಿಮೆ ಮಾಡಬಯಸುತ್ತೇನೆ. ಹತ್ತು ಜನರ ಕೈಯಲ್ಲಿ ಧನ ಸಂಗ್ರಹವಾಗಲೆಂದಲ್ಲ, ಎಲ್ಲರ ಕೈಯಲ್ಲೂ ಹಣ ಸೇರಲಿ ಎಂದು ನನ್ನ ಬಯಕೆ. ಸಾವಿರಾರು ಜನರ ಬೆನ್ನ ಮೇಲೆ ಒಂದು ಹಿಡಿ ಜನರು ಸವಾರಿ ಮಾಡುವ ಹಾಗಾಗಿದೆ ಇಂದು ಯಂತ್ರದಿಂದ. ಇದೆಲ್ಲದರ ಹಿಂದಿನ ಉದ್ದೇಶ್ಯ, ದುಡಿತ ಕಡಿಮೆ ಮಾಡುವ ಔದಾರ್ಯವಲ್ಲ; ಲೋಭ. ಇದನ್ನು ನಾನು ಸಹಿಸಲಾರೆ. ನನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ನಾನು ವಿರೋಧಿಸುತ್ತಿರುವುದು ಈ ಪರಿಯ ನಿರ್ಮಾಣವನ್ನು."

"ಹಾಗಾದರೆ ಯಂತ್ರವೇ ಬೇಡ ಎಂದಲ್ಲ ನೀವು ಹೇಳುವುದು; ಈಗ ಬೆಳೆದುಹೋಗಿರುವ ಯಂತ್ರದ ದುರುಪಯೋಗವನ್ನು ಅಲ್ಲವೆ?"

"ನಿಸ್ಸಂದೇಹವಾಗಿ ಹೌದು ಎನ್ನಬಲ್ಲೆ. ಒಂದು ಮಾತು ನೆನಪಿಡು, ವಿಜ್ಞಾನದ ಸತ್ಯಸೂತ್ರಗಳು, ಶೋಧನೆಗಳು ಲೋಭದ ಸಾಧನೆಗಳಾಗಬಾರದು. ಇದು ನಿಲ್ಲಬೇಕು, ಆಗ ಕೂಲಿಗಾರರಿಗೆ ಈ ಅತಿ ದುಡಿತ ತಪ್ಪೀತು; ಯಂತ್ರ ಪ್ರತಿಕೂಲವಾಗುವ ಬದಲು ಅನುಕೂಲವಾದೀತು. ಯಂತ್ರವೆಂಬುದೇ ಹಾಳಾಗಲಿ ಎಂಬುದಲ್ಲ ನನ್ನ ಗುರಿ, ಅದಕ್ಕೊಂದು ಪರಿಮಿತಿಯಿರಲಿ ಎಂಬುದು."

"ಈ ಮಾತನ್ನು ಬೆಳೆಸಿದರೆ 'ಬಲ'ದಿಂದ ನಡೆವ ಎಲ್ಲ ತೊಡರು ಯಂತ್ರವೂ ಹೋಗಬೇಕೆಂದು ತಾನೆ ಈ ತರ್ಕದ ಕೊನೆ?"

"ಹೋಗಬೇಕಾಗಿ ಬಂದರೆ ಹೋಗಲಿ" ಎಂದರು ಗಾಂಧೀಜಿ. "ಆದರೆ ಒಂದು ಮಾತು ಮಾತ್ರ ಸ್ಪಷ್ಟವಾಗಿ ತಿಳಿದುಕೊ. ನನಗೆ ಮುಖ್ಯವಾದುದು ಮಾನವ ಜೀವನ. ಯಂತ್ರವು ಮನುಷ್ಯನ ಕೈಕಾಲು ಕಟ್ಟಿ ಹಾಕಿದರೆ ಅದು ಸರಿಯಲ್ಲ. ಉದಾಹರಣೆಗೆ ಕೆಲವು ಅಪವಾದಗಳನ್ನು ನಾನೇ ತೋರಿಸುತ್ತೇನೆ. ಬಟ್ಟೆ ಹೊಲೆವ ಯಂತ್ರ ನೋಡು. ಜಗತ್ತಿನಲ್ಲಿ ಕಂಡು ಹಿಡಿದ ಅನೇಕ ವಸ್ತುಗಳಲ್ಲಿ ಇದರಷ್ಟು ಉಪಕಾರಿಯಾದುದು ಮತ್ತೊಂದಿಲ್ಲ. ಆ ಯಂತ್ರದ್ದೊಂದು ಸೊಗಸಾದ ಕತೆಯೇ ಇದೆ. ತನ್ನ ಹೆಂಡತಿ ಅತಿ ಪ್ರಯಾಸಪಡುತ್ತ ಹೊಲಿಯುತ್ತಿದ್ದುದನ್ನು ನೋಡಿ ಸಿಂಗರ್‌ಗೆ ಬಹಳ ನೋವಾಯಿತು. ಆಕೆಯ ಮೇಲಿನ ಪ್ರೀತಿಗಾಗಿ ಹೊಲಿಗೆಯ ಯಂತ್ರವನ್ನು ಕಂಡುಹಿಡಿದ. ಅದರಿಂದ ಆಕೆಯೊಬ್ಬಳಿಗಲ್ಲ, ಆ ಯಂತ್ರವನ್ನು ಕೊಳ್ಳಬಲ್ಲವರೆಲ್ಲರಿಗೂ ದುಡಿತವನ್ನು ಕಡಿಮೆ ಮಾಡಿದ."

"ಈ ಹೊಲಿಗೆ ಯಂತ್ರವನ್ನು ಮಾಡಲು ಕಾರ್ಖಾನೆ ಬೇಡವೇ ಮತ್ತೆ? ಅದಕ್ಕೆ ಪ್ರಕೃತಿ ಬಲದಿಂದ ನಡೆವ ಸಾದಾ ಯಂತ್ರವಾದರೂ ಬೇಕಲ್ಲವೆ?"

"ನಿಜ. ಬೇಕು. ಅಂಥವನ್ನು ರಾಷ್ಟ್ರದ ಆಡಳಿತಕ್ಕೆ ಒಳಪಡಿಸಿ ನಡೆಸ ಬೇಕೆನ್ನುವಷ್ಟು ಮಟ್ಟಿಗೆ ನಾನು ಸಮಾಜವಾದಿ. ಒಳ್ಳೆ ಆದರ್ಶ ರೀತಿಯಲ್ಲಿ ಆಕರ್ಷಕವಾಗುವಂತೆ ಅದನ್ನು ನಡೆಸಬೇಕು. ಅದರ ಮೂಲ ಸೂತ್ರ ದುರಾಶೆಯಲ್ಲ, ಮಾನವ ಕಲ್ಯಾಣವಾಗಬೇಕು. ಈಗಿನ ಕೂಲಿಯ ಪರಿಸ್ಥಿತಿ ಬದಲಾಗಬೇಕು. ನಾಗಾಲೋಟ ಓಡುವ ಧನಸಂಗ್ರಹದ ಈ ಪಿತ್ತ ನಿಲ್ಲಬೇಕು. ಕೂಲಿಕಾರನಿಗೆ ಬಾಳುಗೂಲಿ ಸಿಗಬೇಕು. ಅವನ ಕೆಲಸ ಅವನಿಗೆ ದಿನದಿನವೂ ಭಾರವಾಗಬಾರದು. ದಿನಚರಿಯ ಕೆಲಸದಂತಿರಬೇಕು. ಹೀಗೆ ನಡೆಸಿದರೆ ಕೂಲಿಗಾರನಿಗೂ, ರಾಷ್ಟ್ರಕ್ಕೂ ಯಂತ್ರದ ಸಾಹುಕಾರನಿಗೂ, ಎಲ್ಲರಿಗೂ ಅದರಿಂದ ಹಿತವಾದೀತು. ಈಗಿನ ಹುಚ್ಚು ಓಟ ನಿಂತು ಕೂಲಿಕಾರರು ಆದರ್ಶ ಪರಿಸ್ಥಿತಿಯಲ್ಲಿ ಕೆಲಸ ಮಾಡಬಲ್ಲರು. ನನ್ನ ಮನಸ್ಸಿನಲ್ಲಿರುವ ಅಪವಾದಗಳಲ್ಲಿ ಇದೊಂದು. ಹೊಲಿಗೆ ಯಂತ್ರದ ಹಿನ್ನೆಲೆಗೆ ಪ್ರೀತಿಯಿತ್ತು. ವ್ಯಕ್ತಿಯೇ ಮುಖ್ಯ ಲಕ್ಷ್ಯ. ವ್ಯಕ್ತಿಯ ದುಡಿತ ಕಡಿಮೆ

ಮಾಡುವ ಉದ್ದೇಶ್ಯ ಪ್ರಾಮಾಣಿಕವಾಗಿರಬೇಕು, ಉದಾರವಾಗಿರಬೇಕು, ದುರಾಶೆ ಇರಬಾರದು. ಇಲ್ಲಿ ನೋಡು; ಸೊಟ್ಟಾದ ಕದಿರುಗಳನ್ನು ಸರಿಮಾಡುವ ಯಂತ್ರ ಬಂದರೆ ನನಗೆ ಬಹಳ ಸಂತೋಷವಾದೀತು. ಕಮ್ಮಾರರು ಕದಿರುಗಳನ್ನು ಮಾಡಲಿ. ಅವು ವಿ[illegible]ತವಾದಾಗ ಸರಿಮಾಡಿಕೊಳ್ಳುವ ಯಂತ್ರ ನೂಲುವವರೆಲ್ಲರಲ್ಲೂ ಇರಲಿ. ಹಾಗೆ ದುರಾಶೆಯ ಬದಲು ಪ್ರೀತಿ ಬರಲಿ; ಎಲ್ಲವೂ ಸರಿಹೋಗುತ್ತದೆ."

"ಸಿಂಗರ್ ಯಂತ್ರ, ನಿಮ್ಮ ಕದಿರು ಮುಂತಾದ ಯಂತ್ರ ಇರಬೇಕು ಎನ್ನುತ್ತೀರಿ. ಈ ರೀತಿಯಾದರೆ ಇದಕ್ಕೆ ಮಿತಿ ಬೇಡವೆ? ಈ ಪಟ್ಟಿಗೆ ಕೊನೆಯಲ್ಲಿ?"

ಗಾಂಧೀಜಿ ಹೇಳಿದರು, "ಮನುಷ್ಯನ ವ್ಯಕ್ತಿತ್ವಕ್ಕೆ ಅಡ್ಡಿ ಬಂದರೆ ಯಂತ್ರ ಅಲ್ಲಿಗೇ ಕಡೆ, ಮನುಷ್ಯನಿಗೆ ನೆರವಾಗುವುದನ್ನು ಬಿಟ್ಟು ಅವನ ಸಂಗಡ ಕುಸ್ತಿಗೆ ನಿಂತರೆ ಯಂತ್ರಕ್ಕೆ ಅಲ್ಲೇ ಕೊನೆ. ಯಂತ್ರ ಮನುಷ್ಯನ ಕೈಕಾಲು ಮುರಿಯಬಾರದು."

"ನಾನೀಗ ವ್ಯಾವಹಾರಿಕ ವಿಷಯವನ್ನು ಯೋಚಿಸುತ್ತಿಲ್ಲ. ಆದರ್ಶ ದೃಷ್ಟಿಯಿಂದ ಸಕಲ ಯಂತ್ರವನ್ನೂ ನಿಷೇಧಿಸುತ್ತೀರಾ ಎಂದು ಕೇಳಿದೆ. ಹೊಲಿಗೆ ಯಂತ್ರ ಇರಲಿ ಎಂದರೆ ಬೈಸಿಕಲ್, ಮೋಟಾರ್ ಕೂಡ ಇರಲಿ ಎನ್ನಬೇಕು ತಾನೆ?"

"ಇಲ್ಲ, ಹಾಗೆನ್ನಲಾರೆ. ಅವು ಮನುಷ್ಯನಿಗೆ ಅಷ್ಟೇನೂ ಅಗತ್ಯವಿಲ್ಲ. ವೇಗವಾಗಿ ದೂರದೂರ ಪ್ರಯಾಣ ಮಾಡುವ ಅಗತ್ಯವೇನಿದೆ ಮನುಷ್ಯನಿಗೆ? ಆದರೆ ಸೂಜಿ ಹಾಗಲ್ಲ. ಬಾಳಿನಲ್ಲಿ ಸೂಜಿ ಅತ್ಯಗತ್ಯ. ಅದು ಇಲ್ಲದೆ ನಡೆಯದು. ಆದರ್ಶ ದೃಷ್ಟಿಯಿಂದಲೇನೋ ಸಕಲ ಯಂತ್ರವನ್ನೂ ಬೇಡವೆಂದೇನು; ಮೋಕ್ಷ ಸಾಧನೆಗೆ ಅಡ್ಡ ಬಂದರೆ ಈ ಮೈಯನ್ನೇ ಬೇಡವೆಂದೇನು. ಸಂಪೂರ್ಣ ಮುಕ್ತಿಯನ್ನು ಬಯಸೇನು. ಆ ದೃಷ್ಟಿಯಿಂದ ಎಲ್ಲ ಯಂತ್ರವೂ ಹೊಲ್ಲ; ನಿಜ, ಆದರೆ ಮೈಯಿದ್ದಂತೆಯೇ ಯಂತ್ರ ಬೇಡವೆಂದರೂ ಅಂಟಿಕೊಂಡೇ ತೀರುತ್ತದೆ; ಅನಿವಾರ್ಯ ಆಗಲೇ ಹೇಳಿದೆನಲ್ಲ ನಮ್ಮ ಮೈಯೇ ಒಂದು ಕುಶಲವಾದ ಯಂತ್ರ, ನಮ್ಮ ಮೈಯೇ ಆಗಲಿ ಆತ್ಮವಿಕಾಸಕ್ಕೆ ಅನುಕೂಲವಾಗಬೇಕು, ಆತ್ಮಗರುಡ ಹಾರಲು ಮೈ ಅಡ್ಡಿಯಾದರೆ, ಪ್ರತಿಕೂಲವಾದರೆ, ಅದು ತ್ಯಾಜ್ಯವೇ ಸರಿ."

ವಿಮರ್ಶಕರು ಯಾರೂ ಈ ಸೂತ್ರಕ್ಕೆ ವಿರೋಧಿಗಳಾಗಿರಲಾರರು. ಯಂತ್ರ ದೇಹದಂತೆ; ಆತ್ಮವಿಕಾಸಕ್ಕೆ ಅನುಕೂಲವಾದರೆ, ಅಷ್ಟು ಮಟ್ಟಿಗೆ ಉಪಯೋಗಕರ.

ಪಾಶ್ಚಿಮಾತ್ಯ ನಾಗರಿಕತೆಯ ವಿಷಯವಾಗಿ ಜಿ.ಡಿ.ಎಚ್. ಕೋಲ್- 'ವಿಧಿಯಿಲ್ಲದೆ ಪಾಶ್ಚಿಮಾತ್ಯ ನಾಗರಿಕತೆ ಮಾನವ ಜೀವನಕ್ಕೆ ಹಗೆಯಾಗಿ ಹೆಡೆಯೆತ್ತಿದೆ ಎಂದು ಗಾಂಧೀಜಿ ಹೇಳಿದ್ದನ್ನು ವಿರೋಧಿಸಿ; "ಸ್ಪೈಯಿನ್ ಅಬಿಸೀನಿಯಾಗಳ ಘೋರ ದುರಂತ, ನಮ್ಮ ತಲೆಯ ಮೇಲೇ ನೇತಾಡುತ್ತಿರುವ ನಿರಂತರ ಭೀತಿ, ಅಪಾರ ಸಂಪತ್ತಿನ ಗರ್ಭದಲ್ಲೆ ಅಸಹನೀಯ ದಾರಿದ್ರ್ಯ, ಇವು ಪಾಶ್ಚಿಮಾತ್ಯ ನಾಗರಿಕತೆಯ ದೋಷ. ಗುರುತರ ದೋಷಗಳೇ ನಿಜ. ಆದರೆ ಇವು ಅದರ ಜೀವಾಳವಲ್ಲ... ನಮ್ಮ ಈ ನಾಗರಿಕತೆಯನ್ನು ನಾವು ತಿದ್ದಬಲ್ಲೆವೆನ್ನಲಾರೆ ನಾನು; ಆದರೆ ಈ ನಾಗರಿಕತೆಯನ್ನು ತಿದ್ದಲು ಸಾಧ್ಯವೇ ಇಲ್ಲ, ಕೈಮೀರಿ ಹೋಗಿದೆಯೆಂದು ನಂಬಲಾರೆ. ಮಾನವ ಜೀವನಕ್ಕೆ ಬೇಕಾದ್ದನ್ನೆಲ್ಲಾ ಬಹಿಷ್ಕರಿಸಿ, ಆ ತಳಪಾಯದ ಮೇಲೆ ಇದು ತನ್ನ ಮನೆ ಕಟ್ಟಿಕೊಂಡಿದೆಯೆಂದು ನಾನು ನಂಬಲಾರೆ ಎಂದಿದ್ದಾರೆ. ಹೌದು ಗಾಂಧೀಜಿ ಎತ್ತಿ ತೋರಿದ ದೋಷಗಳು ಸ್ವಾಭಾವಿಕ ದೋಷಗಳಲ್ಲ. ಮಾರ್ಗದೋಷಗಳು. ಭಾರತೀಯ ನಾಗರಿಕತೆಯ ಪ್ರವೃತ್ತಿಯನ್ನೂ ವಿಲಾಯತಿ ನಾಗರಿಕತೆಯ ಪ್ರವೃತ್ತಿಯನ್ನೂ ಹೋಲಿಸುವುದು ಆ ಪುಸ್ತಕದಲ್ಲಿ ಗಾಂಧೀಜಿಯ ಉದ್ದೇಶ್ಯ. ಆ ನಾಗರಿಕತೆ ತಿದ್ದಲು ಸಾಧ್ಯವಿಲ್ಲದಷ್ಟು ಕೈಮೀರಿಲ್ಲವೆಂದು ಗಾಂಧೀಜಿಯೂ ಒಪ್ಪುತ್ತಾರೆ. 'ಗಾಂಧೀಜಿಯ ಹಾಗೆ ಮಹಾಪುರುಷರಾದ, ಹಿಂದೂಸ್ಥಾನದ ಅಥವಾ ಗಾಂಧೀಜಿಯ ದಾರಿಯಲ್ಲದೆ ತಮ್ಮ ಪಡುವಣ ದಾರಿಯಲ್ಲೇ ಮಹಾಪುರುಷರಾದ ನಾಯಕರು ಕಂಡು ಹಿಡಿದ 'ಸ್ವರಾಜ್ಯ' ಪದ್ಧತಿ ಅವರಿಗೂ ಬೇಕೆಂಬುದನ್ನೂ ಒಪ್ಪುತ್ತಾರೆ."

**ಸಿದ್ಧಾಂತದ ಪರಿಮಿತಿ :**

ಜಿ.ಡಿ.ಎಚ್. ಕೋಲ್ ಹೀಗೆ ಕೇಳಿದ್ದಾರೆ : 'ಜರ್ಮನಿಯ, ಇಟಲಿಯ ವಿಮಾನದಳ ಸ್ಪೇಯಿನ್ ಜನರನ್ನು ಧ್ವಂಸ ಮಾಡುತ್ತಿರುವಾಗ, ಚೀನಾದ ನಗರಗಳಲ್ಲಿ ಸಾವಿರಾರು ಜನರನ್ನು ಜಪಾನೀ ವಿಮಾನದಳ ನಾಶ ಮಾಡುತ್ತಿರುವಾಗ, ಜರ್ಮನಿಯ ದಂಡು ಆಸ್ಟ್ರಿಯಾದೊಳಗೆ ನುಗ್ಗಿ ಜೆಕೊಸ್ಲೊವಾಕಿಯದ ಮೇಲೆ ಬೀಳಲಿರುವಾಗ, ಫಿರಂಗಿಯ ಸುರಿಮಳೆಗೆ ಸಿಕ್ಕಿ ಅಬಿಸೀನಿಯಾ ಸೋತಿರುವಾಗ,

ಈಗಲೂ ಅಹಿಂಸೆಯೇ? ಎರಡು ವರ್ಷದ ಕೆಳಗಿನವರೆಗೆ ಏನೇ ಬರಲಿ ಯುದ್ಧ ಕೂಡದು. ಹತ್ಯೆ ಸಲ್ಲದು ಎಂದಿದ್ದೆ ನಾನು. ಇವೊತ್ತು ಇವೆಲ್ಲ ಅನಾಹುತಗಳನ್ನು ನಿಲ್ಲಿಸಲು ಯುದ್ಧ ಮಾಡಿದರೂ ಸೈ ಅನ್ನುತ್ತೇನೆ. ಅವರ ಅಂತರಂಗ ಮಂಥನ ಎಷ್ಟು ತೀವ್ರವಾಗಿದೆಯೋ ಈ ಮುಂದಿನ ವಾಕ್ಯ ಓದಿದರೆ ತಿಳಿಯುತ್ತದೆ : 'ಯುದ್ಧವಾದರೂ ಪರವಾ ಇಲ್ಲ ಎನ್ನುತ್ತೇನೆ ಆದರೂ ನನ್ನೊಳಗಿನ ಜೀವ ನರಹತ್ಯೆಯ ಯೋಜನೆ ಬಂದರೆ ಸಾಕು, ಮುದುಡಿ ಮೂರೇ ಗೇಣಾಗುತ್ತದೆ. ನನ್ನ ಮಟ್ಟಿಗೆ, ಪರರನ್ನು ಕೊಲ್ಲಲಿಕ್ಕಿಂತ ನಾನೇ ಸತ್ತೇನು. ಆದರೆ ಸಾಯುವ ಬದಲು ಕೊಲ್ಲುವುದು ನನ್ನ ಧರ್ಮವಲ್ಲವೆ? ವೈಯಕ್ತಿಕ ಸ್ವರಾಜ್ಯವನ್ನು ಸಾಧಿಸಿದವನಿಗೆ ಇಂಥ ತೊಡಕೇ ಇಲ್ಲವೆಂದಾರು ಗಾಂಧೀಜಿ. ನಾನು ಅದನ್ನು ಗಳಿಸಿಲ್ಲ; ಅಂಥ ತೊಡಕು ನನ್ನ ಪಾಲಿಗೆ ಇಲ್ಲ. ಆ ಸ್ವರಾಜ್ಯ ಸಾಧಿಸಿದ್ದರೆಯೇ ತೊಡಕಾಗುತ್ತಿತ್ತೇನೋ!'.

ಕೋಲ್ ಉದಾಹರಿಸುವ ಸಂದರ್ಭಗಳು ಶ್ರದ್ಧಾಪರೀಕ್ಷೆಯ ಸಂದರ್ಭಗಳೇ. ಗಾಂಧೀಜಿ, ಒಂದಲ್ಲ ಅನೇಕ ಸಲ, ಇದಕ್ಕೆ ಉತ್ತರ ಹೇಳಿದ್ದಾರೆ. ಅವರೂ ತಮ್ಮ ವ್ಯಕ್ತಿ ಸ್ವರಾಜ್ಯವನ್ನು ಸಾಧಿಸಿಲ್ಲ; ಇಡೀ ಲೋಕಕ್ಕೇ ಸ್ವರಾಜ್ಯ ಸಿಗುವ ತನಕ ಅವರಿಗೆ ಸ್ವರಾಜ್ಯ ಸಿದ್ಧಿಯಿಲ್ಲ. ಅವರು ಶ್ರದ್ಧಾಜೀವಿ. ಇಟಲಿಯ ಅಥವಾ ಜಪಾನಿನ ಕ್ರೂರಕೃತ್ಯಗಳ ವರ್ಣನೆ ಕೇಳಿದೊಡನೆಯೆ ಕರಗಿ ಹೋಗುವಂಥದಲ್ಲ ಅಹಿಂಸಾ ಶ್ರದ್ಧೆ. ಹಿಂಸೆಯಿಂದ ಹಿಂಸಾಫಲ ಸಿಗಲೇಬೇಕು. ಒಮ್ಮೆ ಈ ಬೀಜ ಬಿತ್ತಿದರೆ ಅಲ್ಲಿಂದ ಬೀಜ ವೃಕ್ಷನ್ಯಾಯವೇ. 'ಯುದ್ಧ ವಿರೋಧಿ' ಎಂಬ ಪತ್ರಿಕೆಯಲ್ಲಿ ಫಿಲಪ್‌ಮಮ್‌ಫರ್ಡ್ ತನ್ನ ಚೀನೀ ಗೆಳೆಯನೊಬ್ಬನಿಗೆ ಅವನ ರಣಕಾತರಕ್ಕೆ ಹೀಗೆ ಬದಲು ಬರೆದಿದ್ದರು;

> 'ನಿಮ್ಮ ಹಗೆ ಜಪಾನೀ ಸರಕಾರ. ಜಪಾನೀ ರೈತರು ಸಿಪಾಯಿಗಳು ಅಲ್ಲ, ಪಾಪ ವಿದ್ಯಾಗಂಧವೇ ಇಲ್ಲದ ಅವರಿಗೆ ತಾವು ಏಕೆ ಕಾದಬೇಕೋ ಅದೇ ತಿಳಿಯದು. ನಿಮ್ಮ ದೇಶದ ರಕ್ಷಣೆಗಾಗಿ ಸಾಧಾರಣವಾದ ಹಿಂಸಾ ಪದ್ಧತಿಯನ್ನು ಹಿಡಿದರೆ ನೀವು ಯಾರನ್ನು ಕೊಲ್ಲಬೇಕು ಗೊತ್ತೇ? ನಿಮ್ಮ ಹಗೆಗಳೇ ಅಲ್ಲದ ಈ ನಿರ್ದೋಷಿ ಜನರನ್ನೇ. ಹಿಂದೂಸ್ಥಾನದಲ್ಲಿ ಗಾಂಧೀಜಿ ಪ್ರಯೋಗಿಸುತ್ತಿರುವ ಅಹಿಂಸಾ ತಂತ್ರವನ್ನು ಹೂಡಿದರೆ,

ಯೂರೋಪಿನ ದಂಡು-ದಳದ ರೀತಿಯನ್ನು ಅನುಕರಿಸುವುದಕ್ಕಿಂತ ಹೆಚ್ಚು ಫಲಕಾರಿಯಾದೀತು. ನಿಮ್ಮ ಮಹಾನ್ ಧರ್ಮ ಸಂಸ್ಥಾಪಕರ ಉಪದೇಶಕ್ಕೆ ಹೊಂದುವ ದಾರಿ ಅದೇ.. ರಣ ಕುತೂಹಲಿಗಳಾದ ಪಾಶ್ಚಿಮಾತ್ಯ ಜನಾಂಗಗಳಿಂದ ಹೆಚ್ಚುಕಾಲ, ಜಗತ್ತಿನಲ್ಲೆ ಅತಿ ಶಾಂತ ಸ್ವಭಾವದ ಚೀನೀ ಜನ ತಮ್ಮ ಜನರನ್ನೂ ಸಂಸ್ಕೃತಿಯನ್ನೂ ಕಾಪಾಡಿಕೊಂಡು ಬಂದಿರುವುದು ಇಡೀ ಮಾನವ ಸಮೂಹಕ್ಕೇ ಒಂದು ಪಾಠವಲ್ಲವೆ? ದೇಶರಕ್ಷಣೆಗಾಗಿ ಕಾದುತ್ತಿರುವ ಧೀರರನ್ನು ನಾವು ಗೌರವಿಸದೆ ಇಲ್ಲ. ಅವರ ತ್ಯಾಗಕ್ಕೆ ತಲೆಬಾಗುತ್ತೇವೆ; ಅವರ ದಾರಿ ಬೇರೆ. ನಮ್ಮದು ಬೇರೆ ಎಂದುಕೊಳ್ಳುತ್ತೇವೆ. ಏನೇ ಇರಲಿ, ಹತ್ಯೆ ಯಾವಾಗಲೂ ಎಂಥ ಸಂದರ್ಭದಲ್ಲೂ ದುಷ್ಟತನವೇ; ಅದರಿಂದ ಎಂದಿಗೂ ಒಳಿತು ಆಗದು ಎಂದು ನಾವು ನಂಬಿದ್ದೇವೆ. ಶಾಂತಿಮಾರ್ಗ ದಲ್ಲಿ ಸಂಕಟವೆಲ್ಲ ಅಳಿಯದೆ ಹೋಗಬಹುದು. ದಂಡುದಳವಾಯಿಗಳ ಬಲಕ್ಕಿಂತ ಕಟ್ಟಕಡೆಗೆ ಅಹಿಂಸೆಯ ಬಲವೇ ವೈರಿ ನಿರ್ಮೂಲನದಲ್ಲಿ ಹೆಚ್ಚು ಪರಿಣಾಮಕಾರಿ. ಅದರಲ್ಲಿ ನಿಮ್ಮ ಜಾತಿಯ ಧ್ಯೇಯಗಳೆಲ್ಲ ಜೀವಂತ ಉಳಿದುಕೊಳ್ಳುತ್ತವೆ; ಅದೇ ಮುಖ್ಯ.'

ಶ್ರೀಮತಿ ಇರೇನ್ ರಾತ್‌ಬೋನ್ ಕೂಡ ಇಂಥದೇ ಪ್ರಶ್ನೆ ಎತ್ತಿದ್ದಾಳೆ: "ಆತ್ಮ ವಿರೋಧವಾಗಿಯೆ ಆದರೂ ದುರ್ಜನನಿಗೆ ತಲೆಬಾಗುವುದರಿಂದ ಚಿಕ್ಕ ಮಕ್ಕಳು ಬದುಕುವಂತಿದ್ದರೆ, ಈ ಭೂಮಿ ತಾಯಿಯ ಮಗ-ಸಾಮಾನ್ಯನಾಗಲಿ ಸಾಧುಶ್ರೇಷ್ಠನಾಗಲಿ - ಯಾರು ತಾನೆ ಸೆಟೆದು ನಿಂತು ಆ ಮಕ್ಕಳನ್ನು ಬಲಿ ಗೊಟ್ಟಾರು? ಈ ಪ್ರಶ್ನೆಗೆ ಗಾಂಧೀಜಿ ಉತ್ತರ ಕೊಟ್ಟಿಲ್ಲ. ಆ ಪ್ರಶ್ನೆಯ ತಂಟೆಗೆ ಆತ ಹೋಗಿಲ್ಲ."

"ಯೇಸು ಈ ಬಗ್ಗೆ ಸ್ಪಷ್ಟವಾಗಿ ಹೇಳಿದ್ದಾನೆ..... 'ಈ ಮಕ್ಕಳನ್ನು ಪೀಡಿಸಿದವನಿಗೆ ಇದಕ್ಕಿಂತ ಕುತ್ತಿಗೆಗೆ ಬೀಸುಕಲ್ಲು ಕಟ್ಟಿಕೊಂಡು ಸಮುದ್ರದಲ್ಲಿ ಮುಳುಗುವದೇ ಮೇಲು' .. ಗಾಂಧೀಗಿಂತ ಯೇಸು ಕ್ರಿಸ್ತ ಮೇಲು. ನಮಗೆ ದಾರಿ ಹೇಳಿದ್ದಾನೆ." ಕ್ರಿಸ್ತನ ಮಾತಿನಲ್ಲಿ ಕೋಪವಿದೆ. ಅಷ್ಟೆ ಅಲ್ಲಿ ಹೇಳಿದ ಶಿಕ್ಷೆ ಅಪರಾಧಿಗೆ ಇವರು ಕೊಡತಕ್ಕುದಲ್ಲ; ನಾನು ವಿಧಿಸಿಕೊಳ್ಳಬೇಕಾದುದು. ಹೋಗಲಿ, ರಾತ್‌ಬೋನ್

ತಾನು ಕ್ರಿಸ್ತನ ದಾರಿ ಎಂಬುದನ್ನು ತುಳಿದು ಮಕ್ಕಳನ್ನು ಉಳಿಸಬಲ್ಲಳೆ? ಗಾಂಧೀಜಿ ಇದಕ್ಕೆ ಉತ್ತರ ಕೊಟ್ಟಿಲ್ಲವೆಂಬುದು ತಪ್ಪು. ಆ ಪ್ರಶ್ನೆ ಎತ್ತಿ ಸ್ಪಷ್ಟವಾಗಿ ಉತ್ತರ ಹೇಳಿದ್ದಾರೆ. 1300 ವರ್ಷದ ಹಿಂದೆ ಮುಸ್ಲಿಂ ಧರ್ಮವೀರರು ತಮ್ಮ ಕೃತಿಯಲ್ಲಿ ಉತ್ತರಿಸಿದುದನ್ನೇ. ಹಸಿವು ಬಾಯಾರಿಕೆಯಿಂದ ಮಕ್ಕಳು ಹೆಂಗಸರು ಸತ್ತರೂ ಸಾಯಲಿ, ನಮ್ಮ ಅಂತರಾತ್ಮವನ್ನು ಒರೆಸಿಹಾಕಿ ದುರ್ಜನರಿಗೆ ತಲೆಬಾಗಲಿಕ್ಕಿಲ್ಲ ಎಂಬುದನ್ನೇ ಹೇಳಿದ್ದಾರೆ. ದುರ್ಜನರಿಗೆ ತಲೆಬಾಗಿ ಅಂತರಾತ್ಮವನ್ನು ಒರೆಸಿ ಹಾಕಿದರೆ ಅಲ್ಲಿಂದ ಮುಂದೆ ಅವನ ಆಟ ಇನ್ನೂ ಹೆಚ್ಚಿ ಹೋದೀತು; ಅದಕ್ಕೆ ನಾವೇ ದಾರಿ ಮಾಡಿ ಕೊಟ್ಟಂತಾದೀತು.

ಆದರೂ ಇರೇನ್ ರಾತ್‌ಬೋನ್ ಕೂಡ ಹಿಂದ್ ಸ್ವರಾಜ್ಯ 'ಅತ್ಯಂತ ಪ್ರಭಾವಶಾಲಿ ಗ್ರಂಥ' ಎಂದಿದ್ದಾಳೆ. 'ಅದರ ಆಗಾಧ ಸತ್ಯವಂತಿಕೆಯಿಂದ ನನ್ನ ಸತ್ಯವಂತಿಕೆ ಎಷ್ಟು ಎಂದು ಅರಸುವಂತೆ ಆಗಿದೆ, ಜನ ಇದನ್ನು ಓದಬೇಕೆಂದು ಬೇಡಿಕೊಳ್ಳುತ್ತೇನೆ' ಎಂದಿದ್ದಾಳೆ.

ಈ "ಹಿಂದ್ ಸ್ವರಾಜ್ಯ ವಿಶೇಷಾಂಕ"ವನ್ನು ಪ್ರಕಟಿಸಿ, "ಆರ್ಯನ್ ಪಾತ್" ಸಂಪಾದಕರು ಶಾಂತಿ ಮತ್ತು ಅಹಿಂಸೆಗಳಿಗೆ ವಿಶಿಷ್ಟ ಸೇವೆ ಸಲ್ಲಿಸಿದ್ದಾರೆ.

ವಾರ್ಧಾ: 11-12-1938 ಮಹದೇವ ದೇಸಾಯಿ

# ವಿವರಣೆಯ ಮಾತು ಒಂದು

ನನ್ನ ಈ ಚಿಕ್ಕ ಪುಸ್ತಕ ಹೀಗೆ ಅನೇಕಾನೇಕರ ಕಣ್ಣಿಗೆ ಬಿದ್ದಿರುವುದು ನನ್ನ ಪುಣ್ಯ. ಮೂಲಗ್ರಂಥ ಗುಜರಾತಿಯಲ್ಲಿದೆ. ದಕ್ಷಿಣ ಆಫ್ರಿಕಾದ ಇಂಡಿಯನ್ ಒಪಿನಿಯನ್‌ನಲ್ಲಿ ಮೊದಲು ಇದು ಪ್ರಕಟವಾಯಿತು. ಲಂಡನ್‌ನಿಂದ ದಕ್ಷಿಣ ಆಫ್ರಿಕಾಕ್ಕೆ 1908ರಲ್ಲಿ ಹಿಂದಿರುಗುತ್ತಿದ್ದಾಗ, ಭಾರತೀಯ ಕ್ರಾಂತಿಕಾರಿಗಳಿಗೆ, ದಕ್ಷಿಣ ಆಫ್ರಿಕಾದಲ್ಲೂ ಅದೇ ಪಂಥಿಗಳಿಗೆ ಉತ್ತರವಾಗಿ ಇದನ್ನು ಬರೆದೆ. ಲಂಡನ್‌ನಲ್ಲಿದ್ದ ಕ್ರಾಂತಿಕಾರಿಗಳೆನಿಸಿಕೊಂಡವರನ್ನೆಲ್ಲಾ ಕಂಡೆ. ಅವರ ಧೈರ್ಯಕ್ಕೆ ಮೆಚ್ಚಿದೆನಾಗಲಿ ಅವರ ಉತ್ಸಾಹ ತಪ್ಪುದಾರಿ ಹಿಡಿಯಿತು ಅನಿಸಿತು. ಹಿಂದೂಸ್ಥಾನದ ದುಃಖಕ್ಕೆ ನಿವಾರಣೋಪಾಯ ಹಿಂಸೆಯಲ್ಲ; ಭಾರತೀಯ ಸಂಸ್ಕೃತಿಗೆ ತಕ್ಕಂತೆ ಆತ್ಮ ಸಂರಕ್ಷಣೆಗೆ ಬೇರಾವುದಾದರೂ ಉತ್ತಮೋಪಾಯವನ್ನೂ ಅವಲಂಬಿಸಬೇಕು ಅನಿಸಿತು. ದಕ್ಷಿಣ ಆಫ್ರಿಕಾದ ಸತ್ಯಾಗ್ರಹಕ್ಕೆ ಇನ್ನೂ ಎರಡು ಕೂಡ ತುಂಬಿರಲಿಲ್ಲ. ಆದರೂ ಈ ವಿಷಯವಾಗಿ ಕೊಂಚ ಧೈರ್ಯವಾಗಿಯೇ ಬರೆಯುವಷ್ಟು ಬೆಳೆದಿತ್ತು. ಆಗ ನಾನು ಬರೆದದ್ದನ್ನು ಜನ ಮೆಚ್ಚಿದರು. ಅದನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದೆವು. ಅದು ಹಿಂದೂಸ್ಥಾನದಲ್ಲೂ ಕೆಲವು ಜನರ ಕಣ್ಣಿಗೆ ಬಿತ್ತು. ಬೊಂಬಾಯಿ ಸರಕಾರ ಅದನ್ನು ನಿಷೇಧಿಸಿತು. ಅದರ ಭಾಷಾಂತರವನ್ನು ಪ್ರಕಟಿಸಿ ಸರಕಾರಕ್ಕೆ ಉತ್ತರ ಕೊಟ್ಟೆ. ಅದರಲ್ಲೇನಿದೆಯೋ ನನ್ನ ಇಂಗ್ಲಿಷ್ ಗೆಳೆಯರಿಗೆ ತಿಳಿಸುವುದು ನನ್ನ ಕರ್ತವ್ಯವೆಂದು ಹಾಗೆ ಮಾಡಿದೆ.

ಈ ಪುಸ್ತಕವನ್ನು ಎಳೆಯ ಮಗುವಿಗೂ ಕೊಡಬಹುದು. ಇದು ದ್ವೇಷದ ಬದಲು ಪ್ರೀತಿಯನ್ನು ಬೋಧಿಸುತ್ತದೆ. ಹಿಂಸೆಗೆ ಬದಲು ಪ್ರೀತಿಯನ್ನು ಬೋಧಿಸುತ್ತದೆ. ಆತ್ಮತ್ಯಾಗವನ್ನು ಕಲಿಸುತ್ತದೆ. ಪಶುಬಲಕ್ಕೆ ವಿರುದ್ಧವಾಗಿ ಆತ್ಮಬಲವನ್ನು ನಿಲ್ಲಿಸುತ್ತದೆ. ಎಷ್ಟೋ ಸಲ ಈ ಪುಸ್ತಕ ಅಚ್ಚಾಗಿದೆ. ಓದ

ಬಯಸುವವರಿಗೆಲ್ಲ ಇದು ಓದಲು ಯೋಗ್ಯವೆಂದು ಸೂಚಿಸುತ್ತೇನೆ. ಇದರಲ್ಲಿ ಒಂದು ಪದವನ್ನಾದರೂ ಬದಲಿಸಲಾರೆ. ಒಂದೇ ಒಂದನ್ನು ಒಬ್ಬ ಗೆಳತಿಯ ತೃಪ್ತಿಗಾಗಿ ತೆಗೆದುಹಾಕಿದ್ದೇನೆ.

ಈ ಗ್ರಂಥ ಆಧುನಿಕ ನಾಗರಿಕತೆಯ ಮೇಲೆ ತೀವ್ರ ವಿಮರ್ಶೆ, ಖಂಡನೆ. 1908ರಲ್ಲಿ ಬರೆದದ್ದಾದರೂ ಅಂದಿಗಿಂತಲೂ ಇಂದು ನನಗದರಲ್ಲಿ ಹೆಚ್ಚು ನಂಬಿಕೆಯಾಗಿದೆ. ಹಿಂದೂಸ್ಥಾನ ಈ ಆಧುನಿಕ ನಾಗರಿಕತೆಯನ್ನು ವರ್ಜಿಸಿದರೆ ಅದರಿಂದ ಲಾಭವೇ ಆದೀತು ಅನಿಸುತ್ತದೆ ನನಗೆ.

ಆದರೆ ಇದರಲ್ಲಿ ಹೇಳಿರುವ ಸ್ವರಾಜ್ಯವನ್ನು ನಾನಿಂದು ಕೇಳುತ್ತಿಲ್ಲ. ಹಿಂದುಸ್ಥಾನ ಅದಕ್ಕೆ ಸಾಕಷ್ಟು ಮಾಗಿಬಂದಿಲ್ಲ. ಹೀಗೆ ಹೇಳಿದರೆ ಅಧಿಕ ಪ್ರಸಂಗವೆನಿಸಿತೋ ಏನೋ, ನನ್ನ ಅಭಿಪ್ರಾಯವೇನೋ ಅದೇ. ಅದರಲ್ಲಿರುವ ಸ್ವರಾಜ್ಯಕ್ಕಾಗಿ ವ್ಯಕ್ತಿಶಃ ನಾನು ಯತ್ನಿಸುತ್ತಿದ್ದೇನೆ. ನನ್ನ ಸಾಮೂಹಿಕ ಪ್ರಯತ್ನವೇನೋ ಭಾರತೀಯರಭಿಮತದಂತೆ ಶಾಸನ ಸಮ್ಮತ ಪ್ರಜಾತಂತ್ರಕ್ಕಾಗಿ ನಡೆದಿದೆ. ರೈಲನ್ನಾಗಲಿ ಆಸ್ಪತ್ರೆಯನ್ನಾಗಲಿ ನಾಶಮಾಡುವ ಪ್ರಯತ್ನ ನನಗಿಲ್ಲ. ತಾವಾಗಿಯೇ ಅವು ನಾಶವಾದರೆ ಆಗಲಿ ಎಂದು ಬಯಸುತ್ತೇನೆ. ರೈಲಾಗಲಿ ಆಸ್ಪತ್ರೆಯಾಗಲಿ ಶುದ್ಧ ಉತ್ತಮ ನಾಗರಿಕತೆಯ ಲಕ್ಷಣವೇನಲ್ಲ. ಏನೋ, ಅನಿವಾರ್ಯ ದುರ್ಲಕ್ಷಣ ಎಂದೇನು. ರಾಷ್ಟ್ರದ ಗೌರವಕ್ಕೆ ಎಳ್ಳುಕಾಳಿನಷ್ಟಾದರೂ ಸಹಾಯಕವಲ್ಲ ಇವು ಎರಡೂ. ಕೋರ್ಟುಗಳನ್ನು ಶಾಶ್ವತವಾಗಿ ಕಿತ್ತುಹಾಕುವ ಮನಸ್ಸಿದ್ದರೂ ಈಗ ಅದು ನನ್ನ ಗುರಿಯಲ್ಲ. ಎಲ್ಲಾ ಯಂತ್ರಗಳನ್ನೂ ಗಿರಣಿ–ಕಾರಖಾನೆಗಳನ್ನೂ ನಾಶಮಾಡುವುದೂ ಅಲ್ಲ. ಹಾಗೆ ಮಾಡಲು ರಾಷ್ಟ್ರ ಇನ್ನೂ ಹೆಚ್ಚು ತ್ಯಾಗಕ್ಕೆ ಸರಳತೆಗೆ ಸಿದ್ಧವಾಗಬೇಕು.

ಈ ಕಾರ್ಯಕ್ರಮದಲ್ಲಿ ಈಗ ಸದ್ಯ ನಡೆಸುತ್ತಿರುವುದು – ಅಹಿಂಸೆ. ಅದೂ ಸಹ ಈ ಗ್ರಂಥದ ಉದ್ದೇಶ್ಯದಂತೆ ನಡೆಯುತ್ತಿಲ್ಲ. ಹಾಗೆ ನಡೆದರೆ ಒಂದೇ ದಿನದಲ್ಲಿ ಭಾರತ ಸ್ವರಾಜ್ಯ ಸ್ಥಾಪನೆ ಮಾಡೀತು. ಪ್ರೇಮ ಸಿದ್ಧಾಂತವನ್ನು ತನ್ನ ಧರ್ಮದ ಸಕ್ರಿಯ ಅಂಗವಾಗಿ ಹಿಂದೂಸ್ಥಾನ ಸ್ವೀಕರಿಸಿ, ಅದನ್ನು ರಾಜಕೀಯದಲ್ಲಿ ತಂದರೆ. ಸ್ವರಾಜ್ಯವನ್ನು ಸ್ವರ್ಗದಿಂದ ಇಳಿಸಲು ಬಂದೀತು. ಆದರೇ ಆ ದಿನ ಬಹಳ ದೂರ. ದುಃಖಪೂರ್ಣವಾಗಿ ನಾ ಬಲ್ಲೆ.

ಈಗ ನಡೆದಿರುವ ಚಳವಳಿಯ ಬಗ್ಗೆ ಅಪಪ್ರಚಾರ ಮಾಡಲು ಈ ಪುಸ್ತಕದ ವಾಕ್ಯಗಳನ್ನು ಎತ್ತಿ ಬರೆಯುತ್ತಿದ್ದಾರೆ. ಅದರಿಂದ ಈ ಮಾತನ್ನು ಹೇಳುತ್ತಿದ್ದೇನೆ: ನಾನೇನೋ ಆಳವಾದ ಪಿತೂರಿ ನಡೆಸಿದೇನೆಂದು ಹೇಳುವ ಲೇಖನಗಳನ್ನು ಓದಿದ್ದೇನೆ. ಈಗಿರುವ ಅಶಾಂತಿಯಲ್ಲಿ ನನ್ನ ವಿಚಾರಗಳನ್ನು ತುರುಕಲು ಹಿಂದೂಸ್ಥಾನಕ್ಕೆ ನಷ್ಟ ಉಂಟುಮಾಡಿ ನನ್ನ ಧಾರ್ಮಿಕ ಪ್ರಯೋಗಗಳನ್ನು ನಡೆಸುತ್ತಿದ್ದೇನೆಂದು ಹೇಳುತ್ತಿದ್ದಾರೆ. ಸತ್ಯಾಗ್ರಹ ಇದೆಲ್ಲಕ್ಕಿಂತ ದೃಢ ಎಂಬುವೇ ನನ್ನ ಉತ್ತರ. ಇದರಲ್ಲಿ ಗುಟ್ಟೂ ಇಲ್ಲ. ಗುಹ್ಯವೂ ಇಲ್ಲ. 'ಹಿಂದ್ ಸ್ವರಾಜ್ಯ'ದಲ್ಲಿ ವರ್ಣಿಸಿದ ಜೀವನದ ಕೆಲವು ಅಂಶ ಈಗ ಆಚರಿಸಲ್ಪಡುತ್ತಿವೆ. ಪೂರ್ಣವಾಗಿ ಪ್ರಯೋಗಿಸಿದರೂ ಭಯವೇನಿಲ್ಲ. ಆದರೆ ನನ್ನ ಗ್ರಂಥದಿಂದ ಅಲ್ಲೊಂದು ಇಲ್ಲೊಂದು ಈಗಿನ ಚಳವಳಿಗೆ ಅಸಂಬದ್ಧವಾದ ವಾಕ್ಯ ಎತ್ತಿಕೊಂಡು ಜನರನ್ನು ಗಾಬರಿಗೊಳಿಸುವುದು ಸರಿಯಲ್ಲ.

'ಯಂಗ್ ಇಂಡಿಯಾ'
ಜನವರಿ 1921.

*ಮೋ.ಕ. ಗಾಂಧೀ*

# ಪೀಠಿಕೆ

ಸೇವಾಗ್ರಾಮಕ್ಕೆ ಶ್ರೀಮಂತ ಲೋಥಿಯನ್ ಬಂದಿದ್ದಾಗ 'ಹಿಂದ್ ಸ್ವರಾಜ್ಯದ ಪ್ರತಿ ಒಂದು ಇದ್ದರೆ ಕೊಡಿ, ಈಗ ಗಾಂಧೀಜಿ ಹೇಳುವುದೆಲ್ಲಾ ಅದರಲ್ಲಿ ಬೀಜ ರೂಪದಲ್ಲಿದೆ. ಗಾಂಧೀಜಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಆ ಚಿಕ್ಕ ಪುಸ್ತಕವನ್ನು ಎಷ್ಟು ಸಲ ಓದಿದರೂ ಸಾಲದು' ಎಂದರು.

ಕಾಕತಾಳೀಯ ನ್ಯಾಯ ; ಅದೇ ಹೊತ್ತಿಗೆ ಶ್ರೀಮತಿ ಸೋಫಿಯಾ ವಾಡಿಯಾ ಕೂಡ ನಮ್ಮ ಮಂತ್ರಿಗಳನ್ನೂ ಶಾಸನ ಸಭಾ ಸದಸ್ಯರನ್ನೂ, ಬ್ರಿಟಿಷ್ ಅಧಿಕಾರಿಗಳನ್ನೂ ಭಾರತೀಯ ಅಧಿಕಾರಿಗಳನ್ನೂ ಈ ಪುಸ್ತಕ ಪಾರಾಯಣ ಮಾಡಿ ಎನ್ನುತ್ತ ಒಂದು ಲೇಖನ ಬರೆದರು. ಈ ಪ್ರಜಾತಂತ್ರದಲ್ಲಿ ಅಹಿಂಸಾ ಪ್ರಯೋಗ ಸಫಲವಾಗಲಿ ಎಂಬವರೆಲ್ಲ ಇದನ್ನು ಓದಬೇಕೆಂದು ಆಕೆಯ ಅಭಿಪ್ರಾಯ. ಅಹಿಂಸಾಪಂಥಿ ತನ್ನ ಮನೆಯಲ್ಲಿ ಸರ್ವಾಧಿಕಾರಿಯಾಗಬಲ್ಲನೆ? ಕುಡುಕನಾದಾನೆ? ಕಚೇರಿಗೆ ಹೋಗಿ ಹೊಡೆದಾಡಿ ಎಂದು ಕಕ್ಷಿಗಾರರಿಗೆ ವಕೀಲ ಹೇಳಬಲ್ಲನೆ? ಈ ಪ್ರಶ್ನೆಗಳಿಗೆ ಉತ್ತರ ಕೊಡಲು ಪ್ರಧಾನವಾದ ವ್ಯಾವಹಾರಿಕ ಸೂತ್ರಗಳನ್ನು ಮಥಿಸಬೇಕಾದೀತು. ಹಿಂದ್ ಸ್ವರಾಜ್ಯದಲ್ಲಿ ಇದನ್ನೆಲ್ಲ ತಾತ್ವಿಕವಾಗಿ ಪ್ರಚಾರ ಮಾಡಬೇಕು.

ಆಕೆಯ ಬಿನ್ನಹ ಸಕಾಲಿಕವಾಗಿದೆ. 1908ರಲ್ಲಿ ಗಾಂಧೀಜಿ ಲಂಡನ್ನಿನಿಂದ ಹಿಂದಿರುಗುವಾಗ ದಾರಿಯಲ್ಲಿ ಬರೆದು, ತಾವೇ ಸಂಪಾದಕರಾಗಿದ್ದ 'ಇಂಡಿಯನ್ ಒಪಿನಿಯನ್'ನಲ್ಲಿ ಇದನ್ನು ಕ್ರಮವಾಗಿ ಪ್ರಕಟಿಸಿದರು. ಭಾರತೀಯ ಕ್ರಾಂತಿಯ ವಾದಿಗಳಿಗೆ ಉತ್ತರವಾಗಿ ಬರೆದುದು ಆ ಲೇಖನ ಮಾಲೆ. ಆಮೇಲೆ ಪುಸ್ತಕ ರೂಪದಲ್ಲಿ ಬಂತು. ಬೊಂಬಾಯಿ ಸರಕಾರ ಅದನ್ನು ನಿಷೇಧಿಸಿತು. ಕಾಲೆನ್‌ಬಾಕರಿಗೋಸ್ಕರ ಗಾಂಧೀಜ ಅದನ್ನು ಇಂಗ್ಲಿಷಿಗೆ ಭಾಷಾಂತರಿಸಿದ್ದರು. ಬೊಂಬಾಯಿ ಸರಕಾರದ ನಿಷೇಧಾಜ್ಞೆಗೆ ಉತ್ತರವಾಗಿ ಆ ಭಾಷಾಂತರವನ್ನು

ಗಾಂಧೀಜಿ ಪ್ರಕಟಿಸಿದರು. 1912ರಲ್ಲಿ ದಕ್ಷಿಣ ಆಫ್ರಿಕಾಕ್ಕೆ ಹೋದಾಗ ಗೋಖಲೆ ಈ ಭಾಷಾಂತರವನ್ನು ನೋಡಿ, ಎಲ್ಲಾ ಅಪಕ್ವ ವಿಚಾರ, ಅವಸರದಲ್ಲಿ ಬರೆದದ್ದು. ಹಿಂದೂಸ್ಥಾನದಲ್ಲಿ ಒಂದು ವರ್ಷಕಾಲ ಇದ್ದರೆ ಗಾಂಧೀಜಿ ತಾವೇ ಅದನ್ನು ಸುಟ್ಟು ಹಾಕಿಯಾರು ಎಂದಿದ್ದರು. ಆಶ್ರೇಷ್ಠ ಗುರುವಿನ ವಚನ ನಿಜವಾಗಲಿಲ್ಲ. 1921ರಲ್ಲಿ ಅದರ ಬಗ್ಗೆ ಬರೆಯುತ್ತಾ ಗಾಂಧೀಜಿ ಬರೆದರು: 'ಇದು ದ್ವೇಷದ ಬದಲು ಪ್ರೀತಿಯನ್ನು ಬೋಧಿಸುತ್ತದೆ. ಹಿಂಸೆಗೆ ಬದಲು ಆತ್ಮತ್ಯಾಗ ಕಲಿಸುತ್ತದೆ. ಪಶುಬಲಕ್ಕೆ ವಿರುದ್ಧವಾಗಿ ಆತ್ಮಬಲವನ್ನು ಇದಿರು ನಿಲ್ಲಿಸುತ್ತದೆ. ಇದರಲ್ಲಿ ಒಂದು ಪದವನ್ನಾದರೂ ಬದಲಿಸಲಾರೆ; ಒಂದೇ ಒಂದು ಪದವನ್ನು ಒಬ್ಬ ಗೆಳತಿಯ ತಪ್ಪಿಗಾಗಿ ತೆಗೆದುಹಾಕಿದ್ದೇನೆ. ಈ ಗ್ರಂಥ 'ಆಧುನಿಕ' ನಾಗರಿಕತೆಯ ಮೇಲೆ ತೀವ್ರ ವಿಮರ್ಶೆ, ಖಂಡನೆ. 1908ರಲ್ಲಿ ಬರೆದುದಾದರೂ ಅಂದಿಗಿಂತ ಇಂದು ನನಗೆ ಅದರಲ್ಲಿ ಹೆಚ್ಚು ನಂಬಿಕೆಯಾಗಿದೆ... ಆದರೆ ಇದರಲ್ಲಿ ಹೇಳಿರುವ ಸ್ವರಾಜ್ಯವನ್ನು ನಾನಿವೊತ್ತು ಕೇಳುತ್ತಿಲ್ಲ. ಹಿಂದೂಸ್ಥಾನ ಅದಕ್ಕೆ ಸಾಕಷ್ಟು ಮಾಗಿ ಬಂದಿಲ್ಲ. ಹೀಗೆ ಹೇಳಿದರೆ ಅಧಿಕಪ್ರಸಂಗವೆನಿಸಿತೇನೋ; ನನ್ನ ಅಭಿಪ್ರಾಯವೇನೋ ಅದೇ. ಅದರಲ್ಲಿ ವರ್ಣಿಸಿರುವ ಸ್ವರಾಜ್ಯಕ್ಕಾಗಿ ವ್ಯಕ್ತಿಶಃ ನಾನು ಯತ್ನಿಸುತ್ತಿದ್ದೇನೆ. ನನ್ನ ಸಾಮೂಹಿಕ ಪ್ರಯತ್ನವೇನೋ ಭಾರತೀಯ ಅಭಿಮತದಂತೆ ಶಾಸನ ಸಮ್ಮತ ಪ್ರಜಾತಂತ್ರಕ್ಕಾಗಿ ನಡೆದಿದೆ, 1938ರಲ್ಲಿ ಕೂಡ ಗಾಂಧೀಜಿ ಈ ಪುಸ್ತಕದಲ್ಲಿ ಏನೂ ಬದಲಿಸಲಿಲ್ಲ; ಅಲ್ಲಿ ಇಲ್ಲಿ ಭಾಷೆಯನ್ನು ಕೊಂಚ ತಿದ್ದಿದರು. ಅಷ್ಟೇ.

ಹಿಂದೂಸ್ಥಾನ ಸಾಕಷ್ಟು ಮಾಗಿ ಬಂದಿರಲಿ ಇಲ್ಲದಿರಲಿ, ಸತ್ಯ ಅಹಿಂಸೆಗಳ ಅನುಷ್ಠಾನದ ಅಂತಿಮ ಪರಿಣಾಮದ ಚಿತ್ರವನ್ನು ವರ್ಣಿಸುವ ಈ ಮೂಲ ಗ್ರಂಥವನ್ನೇ ಭಾರತೀಯರು ಓದುವುದು ಒಳಿತು. ಓದಿ ಆ ತತ್ತ್ವದ್ವಯವನ್ನು ಸ್ವೀಕರಿಸುವುದೋ ಬಿಡುವುದೋ ತಾವೇ ನಿರ್ಧರಿಸಲಿ.

ಪುಸ್ತಕ ಈಗ ಸಿಗುತ್ತಿಲ್ಲ ಮತ್ತು ಮದ್ರಾಸ್ ಆವೃತ್ತಿಯ ಕೆಲವು ಪ್ರತಿಗಳು ಮಾತ್ರ ತಲಾ ಎಂಟು ಆಣೆಗಳಿಗೆ ಸಿಗುತ್ತಿವೆ ಎಂಬ ವಿಚಾರ ಗಾಂಧೀಜಿಗೆ ತಿಳಿಯಿತು. ಆಗ ಅವರು ಇದನ್ನು ಶೀಘ್ರವೇ ಮುದ್ರಿಸಿ ಸಾಂಕೇತಿಕ ಬೆಲೆಗೆ ಕೊಡಬೇಕು, ಓದಲು ಬಯಸುವವರಿಗೆಲ್ಲಾ ಸಿಗುವಂತೆ ಆಗಬೇಕು ಎಂದು ಹೇಳಿದರು. ಆದ್ದರಿಂದ ನವಜೀವನ ಪ್ರಕಟಣ ಮಂದಿರ ಇದನ್ನು ಈಗ ಹೆಚ್ಚು ಕಡಿಮೆ ಅಸಲು ಬೆಲೆಗೆ ಹೊರತಂದಿದೆ.

ವರ್ಧಾ: 2-2-1938

ಮಹದೇವ ದೇಸಾಯಿ

# ಅಧ್ಯಕ್ಷಕರ ನುಡಿ

ದೇಶದ ಜನರ ಮೇಲೆ ಪ್ರಭುತ್ವದ ಹಿಡಿತ ಜಾಸ್ತಿಯಾಗುತ್ತಿರುವಂತೆ ಗಾಂಧಿ ಸಾಹಿತ್ಯ ಕೃತಿಗಳು ಹೆಚ್ಚು ಜನಪ್ರಿಯವಾಗುತ್ತಿರುವುದು ಸಹಜ ಮತ್ತು ಶುಭ ಸೂಚನೆಯೂ ಹೌದು. ಗಾಂಧಿ ಕೃತಿಗಳ ಕನ್ನಡ ಅವತರಣಿಕೆಗಳಲ್ಲಿ ಹಲವನ್ನು ಪ್ರಕಾಶಿಸಿ ಸುಲಭ ಬೆಲೆಯಲ್ಲಿ ಮಾರಾಟ ಮಾಡುತ್ತಿರುವ ಕರ್ನಾಟಕ ಗಾಂಧಿ ಸ್ಮಾರಕ ನಿಧಿಗಂತೂ ಇದು ಅಪಾರ ಸಂತೋಷದ ಸಂಗತಿ.

'ಹಿಂದ್ ಸ್ವರಾಜ್' ಗಾಂಧೀಜಿಯ ಮೊದಲ ಕೃತಿ ಹೇಗೋ ಅವರ ಸಮಗ್ರ ತತ್ವವನ್ನು ಒಂದೆಡೆಯೇ ಹೇಳುವ ವಿಶಿಷ್ಟ ಕೃತಿಯೂ ಹೌದು. ಗಾಂಧೀಜಿಯನ್ನು ಜನಪ್ರಿಯವಾಗಿ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ 'ರಾಷ್ಟ್ರಪಿತ' ಎಂದು ಪ್ರಸ್ತುತಪಡಿಸುವ ಸರಳ ರೀತಿ ಅವರ ಪೂರ್ಣ ವ್ಯಕ್ತಿತ್ವವನ್ನು ಪರಿಚಯಿಸದಿರುವ ಕೊರತೆಯನ್ನು ತುಂಬಿಕೊಡುವಂತಿರುವ ಈ ಕೃತಿ ಗಾಂಧಿ ಹೇಗೆ ಒಂದು ಯುಗಪ್ರವರ್ತಕ ಚಿಂತಕರೆಂಬುದನ್ನೂ ಹೇಳುತ್ತದೆ. ಹಾಗಾಗಿ ಇದು ವಿಶ್ವಾದ್ಯಂತ ಅಧ್ಯಯನಕ್ಕೊಳಗಾಗಿರುವ ಕೃತಿಯಾಗಿದೆ. ಇದು ಹೀಗೆ ಅಧ್ಯಯನಕ್ಕೆ ಒಳಪಡಲು ಮುಖ್ಯ ಕಾರಣವಾಗಿರುವುದು, ಮನುಷ್ಯ ಜನಾಂಗಕ್ಕೆ ವೈಜ್ಞಾನಿಕ ಮತ್ತು ವೈಚಾರಿಕ ಯುಗ ಕೊಟ್ಟ ವರವೆಂದೇ ಬಹುಕಾಲ ಪರಿಗಣಿಸಲ್ಪಟ್ಟ ಆಧುನಿಕತೆಯ ಸಮಸ್ಯೆಗಳು ಜಾಗತೀಕರಣದ ಈ ಸಂದರ್ಭದಲ್ಲಿ ಜನಜೀವನವನ್ನು ವ್ಯಾವಹಾರಿಕ ಮತ್ತು ನೈತಿಕ ನೆಲೆಗಳೆರಡರಲ್ಲೂ ಕಾಡತೊಡಗಿರುವುದೇ ಆಗಿದೆ.

ಗಾಂಧೀಜಿಯ ಈ ಪುಸ್ತಕ ಪಶ್ಚಿಮದ ನಾಗರೀಕತೆ, ವಿಜ್ಞಾನ ನಾಗರೀಕತೆ, ಯಂತ್ರ ನಾಗರೀಕತೆ ಇತ್ಯಾದಿ ಹೆಸರುಗಳಿಂದ ಕರೆಯಲ್ಪಡುವ ಆಧುನಿಕ ನಾಗರೀಕತೆಯನ್ನು ಸರ್ವ ದಿಕ್ಕುಗಳಿಂದಲೂ ವಿಮರ್ಶಿಸುವ ಕೃತಿಯೇ ಆಗಿದೆ. ಹಾಗೇ ಈ ನಾಗರೀಕತೆ ಒಡ್ಡುವ ಸಮಸ್ಯೆಗಳನ್ನು ಮೀರಲು ಇರುವ ಸಹಜ

ಮಾರ್ಗಗಳನ್ನು ತೋರುವ ಕೃತಿಯೂ ಆಗಿದೆ. ಹಾಗಾಗಿಯೇ ಈ ಪುಸ್ತಕ ಆಧುನಿಕ ನಾಗರೀಕತೆಯ ಸಮಸ್ಯೆಗಳಿಂದ ಬಾಧಿತರಾಗಿರುವ ಎಲ್ಲರ ಗಮನವನ್ನೂ ಸೆಳೆದಿದೆ. ಆದರೆ ಹೊರಗಿನ ಬಲಿಷ್ಠ ಪ್ರಭುತ್ವದ ಹಲವು ರೂಪಗಳಲ್ಲಿ ಕಾಣಿಸಿಕೊಳ್ಳುತ್ತಿರುವ ಪಶ್ಚಿಮದ ಆಧುನಿಕತೆಯ ಸವಾಲುಗಳನ್ನು ನಮ್ಮೊಳಗೇ ಮತ್ತು ನಮ್ಮದೇ ಆದ ಒಂದು ನೈತಿಕತೆಯ ಪ್ರಭುತ್ವ ಸ್ಥಾಪಿಸಿಕೊಂಡು ಎದುರಿಸುವ ಬಗೆಗಳನ್ನು ಹೇಳುವ ಈ ಕೃತಿಯ ಪರಿಣಾಮ ಬಹುಬೇಗ ಜನಪ್ರಿಯವಾಗುವಂತಹುದಲ್ಲ. ವಿಶೇಷವಾಗಿ ಆಧುನಿಕ ನಾಗರೀಕತೆ ಜನತೆಗೆ ಒದಗಿಸಿರುವ ಹಲವು ಸುಖ-ಸಂಪತ್ತುಗಳ ಹಿನ್ನೆಲೆಯಲ್ಲಿ. ಹಾಗಾಗಿ ಈ ಕೃತಿ ಜಗತ್ತಿನಾದ್ಯಂತ ಮಾತ್ರವಲ್ಲದೆ ಕರ್ನಾಟಕದಲ್ಲೂ ತನ್ನ ಕನ್ನಡ ಅವತರಣಿಕೆಯ ರೂಪದಲ್ಲಿ ಖರ್ಚಾಗುತ್ತಿರುವುದು ಮುಂಬರುವ ದಿನಗಳ ಜನರಾಜಕಾರಣದ ದೃಷ್ಟಿಯಿಂದ ಕುತೂಹಲಕಾರಿ ಎನಿಸುತ್ತದೆ.

'ಹಿಂದ್ ಸ್ವರಾಜ್' ಗಾಂಧಿಯವರ ಬದುಕಿನಂತೆಯೇ ಬಹಳ ಸರಳ ವಿಚಾರಗಳಿಂದ ಕೂಡಿ ಬಹಳ ಸರಳ ಶೈಲಿಯಲ್ಲಿ ನಿರೂಪಿತವಾಗಿರುವ ಕೃತಿ. ಇದರ ಸಂಭಾಷಣಾ ರೂಪದ ಶೈಲಿಯಂತೂ ಅನನ್ಯ. ಇದನ್ನು ಹಿರಿಯ ಗಾಂಧಿವಾದಿ ಸಿದ್ಧವನಳ್ಳಿ ಕೃಷ್ಣಶರ್ಮರು ಅತ್ಯಂತ ಸರಳ ಕನ್ನಡದಲ್ಲಿ ಅನುವಾದಿಸಿಕೊಟ್ಟು ಕನ್ನಡದಲ್ಲಿ ಗಾಂಧಿ ಸಾಹಿತ್ಯಕ್ಕೆ ಒಂದು ದೊಡ್ಡ ಕೊಡುಗೆಯನ್ನೇ ಸಲ್ಲಿಸಿ ಹೋಗಿದ್ದಾರೆ. ಅವರಿಗೆ ನಮ್ಮ ನಮನಗಳು. ಹಾಗೇ ಈ ಕೃತಿಯ ಈ ಆವೃತ್ತಿಗೆ ಅನುವು ಮಾಡಿಕೊಟ್ಟಿರುವ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಕಾರ್ಯಕಾರಿ ಸಮಿತಿ ಸದಸ್ಯರಿಗೂ ಮತ್ತು ಇದನ್ನು ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟಿರುವ ರಿಪ್ಲಿಕ ಆಫ್‌ಸೆಟ್ ಪ್ರಿಂಟರ್ಸ್‌ನ ಶ್ರೀ ಆರ್. ದಯಾನಂದ ಸಾಗರ್ ಮತ್ತು ಅವರ ಬಳಗದವರಿಗೂ ನಮ್ಮ ಧನ್ಯವಾದಗಳು ಸಲ್ಲುತ್ತವೆ.

೧೫, ಏಪ್ರಿಲ್, ೨೦೧೮
ಬೆಂಗಳೂರು

**ಡಾ. ವೂಡೇ ಪಿ. ಕೃಷ್ಣ**
ಅಧ್ಯಕ್ಷರು
ಕರ್ನಾಟಕ ಗಾಂಧಿ ಸ್ಮಾರಕ ನಿಧಿ

# ಪ್ರಕಾಶಕರ ಮಾತು

ಗಾಂಧೀ ತತ್ವವೆಂಬುದು ಕತ್ತಲಿನ ಸಮಾಜಕ್ಕೆ ದೀವಟಿಗೆಯಿದ್ದಂತೆ. ಗಾಂಧೀಜಿಯವರ ಸತ್ಯ, ಅಹಿಂಸೆ ಮತ್ತು ಸ್ವದೇಶಿ ತತ್ವಗಳು ಬದುಕಿನ ದಾರಿಯನ್ನು ಹಸನುಗೊಳಿಸಲು ನೇಗಿಲಿದ್ದಂತೆ

ಭಾರತಕ್ಕೆ ಎಂತಹ ಸ್ವರಾಜ್ಯ ಬೇಕು ಎಂಬುದನ್ನು ವಿವರಿಸಲು ಮಹಾತ್ಮ ಗಾಂಧೀಯವರು 1908ರಲ್ಲಿ ಲಂಡನಿಂದ ಹಿಂದಿರುಗುವಾಗ ಹಡಗಿನಲ್ಲಿ 'ಹಿಂದ್ ಸ್ವರಾಜ್' ಕೃತಿಯನ್ನು ಬರೆದರು. ಇದು 30ಸಾವಿರ ಶಬ್ದಗಳ ಗ್ರಂಥ ಇದನ್ನು 1908 ನವೆಂಬರ್ 13ರಿಂದ 22ರ ವರೆಗೆ, ಹಗಲು ರಾತ್ರಿ ಬರೆದರು. ಒಟ್ಟು 271 ಪುಟಗಳ ಹಸ್ತಪ್ರತಿ. ಅದರಲ್ಲಿ 50 ಪುಟಗಳನ್ನು ಗಾಂಧೀಜಿಯವರು ಎಡಗೈಯಿಂದ ಬರೆದಿದ್ದಾರೆ. ಗಾಂಧೀಜಿಯವರು ಗುಜರಾತಿಯಲ್ಲಿ ರಚಿಸಿದ ಕೃತಿಯನ್ನು ಕಾಲೆನ್‌ಬಾಕ್ರಿಗೋಸ್ಕರ ಇಂಗ್ಲೀಷಿಗೆ ಭಾಷಾಂತರಿಸಿದರು. ಇದನ್ನು ಇಂಡಿಯನ್ ಒಪೀನಿಯನ್ ಪತ್ರಿಕೆಯಲ್ಲಿ ಕ್ರಮವಾಗಿ ಪ್ರಕಟಿಸಿದರು. ಬೊಂಬಾಯಿ ಸರಕಾರ ಇದನ್ನು ನಿಷೇಧಿಸಿತು. ಗೋಖಲೆಯವರು 1912ರಲ್ಲಿ ದಕ್ಷಿಣ ಆಫ್ರಿಕಾಗೆ ಹೋಗಿದ್ದಾಗ ಈ ಕೃತಿಯಲ್ಲಿ ಅಪಕ್ವ ವಿಚಾರಗಳಿವೆ ಇದು ಅವಸರದಲ್ಲಿ ಹೆಣೆದ ಕೃತಿ ಎಂದಿದ್ದರು. ಆದರೆ 1921ರಲ್ಲಿ ಗಾಂಧೀಜಿ ಅವರು ಅದರ ಬಗ್ಗೆ ಬರಿಯುತ್ತ ಇದು ದ್ವೇಷದ ಬದಲು ಪ್ರೀತಿಯನ್ನು ಬೋಧಿಸುತ್ತದೆ. ಹಿಂಸೆಗೆ ಬದಲು ಆತ್ಮತ್ಯಾಗವನ್ನು ಕಲಿಸುತ್ತದೆ ಪಶುಬಲಕ್ಕೆ ವಿರುದ್ಧವಾಗಿ ಆತ್ಮಬಲವನ್ನು ಇದಿರು ನಿಲ್ಲಿಸುತ್ತದೆ. ಇದರಲ್ಲಿ ಒಂದು ಪದವನ್ನು ಬದಲಿಸಲಾರೆ ಎಂದಿದ್ದಾರೆ. 1928ರಲ್ಲಿಯೂ ಗಾಂಧೀಜಿ ಕೂಡ ಒಂದು ಪದವನ್ನೂ ಬದಲಿಸಲಿಲ್ಲ. ಅಲ್ಲಿ ಇಲ್ಲಿ ಭಾಷೆಯನ್ನು ಸ್ವಲ್ಪ ತಿದ್ದಿದ್ದರು. ಮಹಾತ್ಮ ಗಾಂಧೀಜಿಯವರು ಒಬ್ಬ ಸಂಪಾದಕ ಹಾಗೂ ಓದುಗನ ನಡುವಿನ ಸಂಭಾಷಣೆಯಂತೆ ಈ ಕೃತಿಯನ್ನು ರಚಿಸಿದ್ದಾರೆ.

ಈ ಕೃತಿಯ ಶತಮಾನೋತ್ಸವ ವರ್ಷ ಇದಾಗಿದೆ. ಈ ಕೃತಿಯಲ್ಲಿ ಕಾಂಗ್ರೆಸ್ಸು ಮತ್ತು ಅದರ ಅಧಿಕಾರಿಗಳು ಬಂಗಾಳ ವಿಭಜನೆ, ಅಶಾಂತಿ ಮತ್ತು ಅಸಂತೋಷ, ಸ್ವರಾಜ್ಯ ಎಂದರೇನು?, ಅಂದಿನ ಇಂಗ್ಲೆಂಡಿನ ಸ್ಥಿತಿ, ನಾಗರಿಕತೆ, ಹಿಂದೂಸ್ಥಾನ ಪರಾಧೀನವಾದ ಬಗ್ಗೆ, ಇಂದಿನ ಹಿಂದೂಸ್ಥಾನದ ಸ್ಥಿತಿ, ರೈಲು ಬಂಡಿ ಬಗ್ಗೆ, ಹಿಂದೂ ಮುಸಲ್ಮಾನರ ಬಗ್ಗೆ, ವಕೀಲರ ಬಗ್ಗೆ, ವೈದ್ಯರ ಬಗ್ಗೆ, ಹಿಂದೂಸ್ಥಾನ ಹೇಗೆ ಸ್ವಾತಂತ್ರ್ಯವಾದೀತು ಎಂಬುದರ ಬಗ್ಗೆ, ಸತ್ಯಾಗ್ರಹ, ಶಿಕ್ಷಣ, ಯಂತ್ರ ಮತ್ತು ಕಾರಖಾನೆ ಬಗ್ಗೆ ಪ್ರಶ್ನೋತ್ತರ ಮಾಲಿಕೆಯಲ್ಲಿ ಬರೆದಿದ್ದಾರೆ.

ಇಂತಹ ಕೃತಿಯನ್ನು ಪ್ರಕಟಿಸಿ ಮಹಾತ್ಮರ ಅಭಿಪ್ರಾಯಗಳನ್ನು ಜನರಲ್ಲಿ ಪರಿಚಯಿಸಿದ ಸ್ಮಾರಕ ನಿಧಿಯ ಹಿಂದಿನ ಅಧ್ಯಕ್ಷರು ಹಾಗೂ ಅಂದಿನ ಪ್ರಕಟನಾ ಸಲಹಾ ಸಮಿತಿಯ ಸದಸ್ಯರೆಲ್ಲರ ಸಹಾಯವನ್ನು ನಾನು ನೆನೆಯುತ್ತೇನೆ. ಕನ್ನಡದಲ್ಲಿ ಮುದ್ರಣವಾದ ಈ ಕೃತಿಯ ಮೊದಲ ಮುದ್ರಣಕ್ಕಿದ್ದ ಮಹಾತ್ಮರ ಮುನ್ನುಡಿ, ಹಾಗೂ ಮಹದೇವ ದೇಸಾಯಿಯವರ ಪೀಠಿಕೆಗಳು ತುಂಬಾ ಅರ್ಥಪೂರ್ಣ ವಾಗಿರುವ ಪ್ರಯುಕ್ತ ಅವುಗಳನ್ನು ಹಾಗೆಯೇ ಮುಂದುವರಿಸಲಾಗಿದೆ.

ಈ ಕಾರ್ಯದಲ್ಲಿ ನಮ್ಮೊಡನೆ ಸಹಕರಿಸಿದ ಕರ್ನಾಟಕ ಗಾಂಧೀ ಸ್ಮಾರಕ ನಿಧಿಯ ಕಾರ್ಯಕಾರಿ ಸಮಿತಿ ಸದಸ್ಯರಿಗೂ ಹಾಗೂ ಈ ಕೃತಿ ಕರಡು ತಿದ್ದುಪಡಿ ಮಾಡಿದ ನೀಲತ್ತಳ್ಳಿ ಕಸ್ತೂರಿ ಅವರಿಗೂ ಈ ಕೃತಿಗೆ ಅಂದವಾದ ಮುಖಪುಟ ರಚಿಸಿಕೊಟ್ಟ ಡಾ. ಬಸವರಾಜ ಪಾಟೀಲ್ ಅವರಿಗೂ ಮತ್ತು ಅಂದವಾಗಿ ಸಮಯಕ್ಕೆ ಸರಿಯಾಗಿ ಮುದ್ರಿಸಿಕೊಟ್ಟ ಇಳಾ ಮುದ್ರಣದ ಮಾಲೀಕರಾದ ಶ್ರೀಯುತ ಬಿ. ಗುರುಮೂರ್ತಿ ಅವರಿಗೂ ಧನ್ಯವಾದಗಳು ಸಲ್ಲುತ್ತವೆ.

**ಡಾ. ಹೋ. ಶ್ರೀನಿವಾಸಯ್ಯ**
ಅಧ್ಯಕ್ಷರು ಮತ್ತು ಪ್ರಕಾಶಕರು
ಕರ್ನಾಟಕ ಗಾಂಧೀ ಸ್ಮಾರಕ ನಿಧಿ

# ಪರಿವಿಡಿ

# ಹಿಂದ್ ಸ್ವರಾಜ್ಯ

## ಅಧ್ಯಾಯ – 1

## ಕಾಂಗ್ರೆಸ್ಸೂ ಅದರ ಅಧಿಕಾರಿಗಳೂ

**ಓದುಗ :** ಹಿಂದೂಸ್ಥಾನದಲ್ಲೀಗ ಸ್ವರಾಜ್ಯದ ಗಾಳಿ ಬೀಸುತ್ತಿದೆ. ಭಾರತೀಯರೆಲ್ಲರೂ ಸ್ವಾತಂತ್ರ್ಯಕ್ಕಾಗಿ ಹಂಬಲಿಸುತ್ತಿದ್ದಾರೆ. ದಕ್ಷಿಣ ಆಫ್ರಿಕಾದ ಭಾರತೀಯರಲ್ಲೂ ಅದೇ ಭಾವಲಹರಿ ಹರಿಯುತ್ತಿದೆ. ತಮ್ಮ ಅಧಿಕಾರವನ್ನು ಗಳಿಸಿಕೊಳ್ಳಲು ಭಾರತೀಯರು ಉತ್ಸುಕರಾಗಿದ್ದಾರೆ. ಈ ವಿಷಯವಾಗಿ ನಿಮ್ಮದೇನು ವಿಚಾರ? ದಯೆಯಿಟ್ಟು ತಿಳಿಸುತ್ತೀರಾ?

**ಸಂಪಾದಕ :** ನಿಮ್ಮ ಪ್ರಶ್ನೆಯೇನೋ ಸರಿಯೆ, ಆದರೆ ಅದಕ್ಕೆ ಉತ್ತರ ಹೇಳುವುದು ಸುಲಭವಲ್ಲ. ಪತ್ರಿಕೆಗೆ, ಜನರ ಭಾವಗಳನ್ನು ಅರಿತು ಅವನ್ನು ಪ್ರಕಟಿಸುವುದು ಮೊಟ್ಟಮೊದಲನೆ ಕೆಲಸ; ಜನತೆಯಲ್ಲಿ ಯಾವ ಭಾವನೆ ಅಗತ್ಯವೋ ಅದನ್ನು ಎಚ್ಚರಗೊಳಿಸುವುದು ಎರಡನೆ ಕೆಲಸ; ಜನರಲ್ಲಿ ಏನಾದರೂ ದೋಷಗಳಿದ್ದರೆ ಯಾವ ಕಷ್ಟವನ್ನೂ ಲೆಕ್ಕಿಸದೆ ನಿರ್ಭಯವಾಗಿ ಎಲ್ಲರ ಮುಂದೆಯೂ ಅದನ್ನು ತಿಳಿಸುವುದು ಮೂರನೆ ಕೆಲಸ. ನಿಮ್ಮ ಪ್ರಶ್ನೆಗೆ ಉತ್ತರ ಕೊಡಲು ಈ ಮೂರನ್ನು ಒಟ್ಟಿಗೆ ಮಾಡಬೇಕಾಗುತ್ತದೆ. ಸ್ವಲ್ಪ ಮಟ್ಟಿಗೆ ಜನರ ವಿಚಾರವನ್ನು ತಿಳಿಸಬೇಕು; ಜನರಲ್ಲಿ ಕೆಲವು ಭಾವನೆಗಳನ್ನು ಮೂಡಿಸಲು ಪ್ರಯತ್ನಿಸಬೇಕು; ಇರುವ ದೋಷಗಳನ್ನು ಬೆಳಕಿಗೆ ತರಬೇಕು. ಚಿಂತೆಯಿಲ್ಲ; ನೀವು ಪ್ರಶ್ನೆ ಕೇಳಿದಿರಿ, ಉತ್ತರ ಕೊಡುವುದು ನನ್ನ ಕರ್ತವ್ಯ.

**ಓದುಗ :** ಭಾರತೀಯರಲ್ಲಿ ಸ್ವರಾಜ್ಯದ ಇಚ್ಛೆ ಹುಟ್ಟಿದೆ ಎಂದು ನೀವು ನಿಜವಾಗಿ ಎಣಿಸುತ್ತೀರಾ?

**ಸಂಪಾದಕ :** 'ರಾಷ್ಟ್ರೀಯ ಮಹಾಸಭೆ'–National Congress ಸ್ಥಾಪಿತವಾದುದೇ ಆ ಇಚ್ಛೆಯಿಂದ. ಶಬ್ದವೇ ಅದನ್ನು ಸೂಚಿಸುತ್ತದೆ.

**ಓದುಗ :** ಈ ಮಾತು ಸರಿಯಾಗಿ ತೋರದು. ಹಿಂದೂಸ್ಥಾನದ ತರುಣರು ಕಾಂಗ್ರೆಸನ್ನ ಗಣನೆಗೇ ತೆಗೆದುಕೊಂಡಿಲ್ಲ. ಇಂಗ್ಲಿಷರ ರಾಜ್ಯವನ್ನು ದೃಢಗೊಳಿಸುವ ಸಾಧನ ಅದು ಎನ್ನುತ್ತಾರೆ.

**ಸಂಪಾದಕ :** ತರುಣ ಲೋಕದ ಈ ಅಭಿಪ್ರಾಯ ಸರಿಯಲ್ಲ. ಭಾರತ ಪಿತಾಮಹ ದಾದಾಭಾಯಿ ನೌರೋಜೀ ನೆಲವನ್ನು ಹದಗೊಳಿಸಿರದಿದ್ದರೆ, ಇವೊತ್ತು ನಮ್ಮ ತರುಣರು ಸ್ವರಾಜ್ಯದ ಮಾತನ್ನೆ ಆಡಲು ಆಗುತ್ತಿರಲಿಲ್ಲ. ಕಾಂಗ್ರೆಸ್ಸಿನ ಉದ್ದೇಶಗಳನ್ನು ಸಾಧಿಸಲು ಮಿ. ಹ್ಯೂಮ್ ಏನು ಬರೆದರೋ ಚಾಟಿ ಬೀಸಿಬೀಸಿ ಹೇಗೆ ನಮ್ಮನ್ನು ಅವರು ಕರ್ಮಣ್ಯರಾಗಿ ಮಾಡಿದರೋ, ಅದನ್ನೆಲ್ಲ ಮರೆಯಲು ಸಾಧ್ಯವೆ? ಸರ್ ವಿಲಿಯಂ ವೆಡರ್ ಬರ್ನ್ ಕೂಡ ಇದಕ್ಕಾಗಿಯೆ ತಮ್ಮ ತನುಮನಧನಗಳನ್ನು ಅರ್ಪಿಸಿದರು. ಅವರು ಇಂಗ್ಲಿಷ್ ರಾಜ್ಯದ ಬಗ್ಗೆ ಅಂದು ಬರೆದ ಲೇಖನಗಳು ಈಗಲೂ ಓದಲು ಯೋಗ್ಯವಾಗಿವೆ. ರಾಷ್ಟ್ರವನ್ನು ಸಿದ್ಧಪಡಿಸಬೇಕೆಂದು ಪ್ರೊ. ಗೋಖಲೆ ಬಡತನದ ವ್ರತ ಹಿಡಿದರು. ತಮ್ಮ ಬಾಳಿನಲ್ಲಿ ಇಪ್ಪತ್ತು ವರ್ಷ ಇದಕ್ಕೇ ಕೊಟ್ಟರು. ಈಗಲೂ ಬಡತನದಲ್ಲಿಯೆ ಬದುಕುತ್ತಿದ್ದಾರೆ. ಕಾಂಗ್ರೆಸ್ಸಿನ ಮೂಲಕ ಸ್ವರಾಜ್ಯದ ಬೀಜವನ್ನು ಬಿತ್ತಿದವರಲ್ಲಿ ಸ್ವರ್ಗೀಯ ನ್ಯಾಯಮೂರ್ತಿ ಬದ್ರುದ್ದೀನ್ ತೈಯಬಜೀ ಒಬ್ಬರು. ಇದೇ ರೀತಿ ಬಂಗಾಳ, ಮದರಾಸು, ಪಂಜಾಬು ಇತ್ಯಾದಿಗಳಲ್ಲಿಯೂ ಕಾಂಗ್ರೆಸ್ಸಿನ, ಹಿಂದೂಸ್ಥಾನದ ಹಿತೈಷಿಗಳು ಹುಟ್ಟಿದ್ದಾರೆ ಅವರಲ್ಲಿ ಭಾರತೀಯರೂ ಉಂಟು, ಇಂಗ್ಲಿಷರೂ ಉಂಟು.

**ಓದುಗ :** ತಡೆಯಿರಿ, ನೀವು ಬಹಳ ದೂರ ಹೋದಿರಿ. ನನ್ನ ಪ್ರಶ್ನೆ ಬೇರೆ, ನಿಮ್ಮ ಉತ್ತರವೇ ಬೇರೆ. ನಾನು ಸ್ವರಾಜ್ಯದ ವಿಷಯ ಕೇಳಿದುದು ನೀವು ಹೇಳುತ್ತಿರುವುದು ಪರ-ರಾಜ್ಯದ ಮಾತು. ನನಗೆ ಇಂಗ್ಲಿಷರ ಹೆಸರೇ ಸಹಿಸದು. ನೀವೋ ಅವರ ಹೆಸರಿನ ಸರವನ್ನೇ ಪೋಣಿಸುತ್ತಿದ್ದೀರಿ. ಹೀಗಾದರೆ ನಮ್ಮಿಬ್ಬರಿಗೂ ಮೇಳ ಕೂಡಲಿಕ್ಕೆ ಇಲ್ಲ ಎನಿಸುತ್ತದೆ. ನನಗೆ ಬೇಕಾದುದು ಸ್ವರಾಜ್ಯದ ವಿಷಯ. ಉಳಿದ ಜಾಣತನದ ಮಾತು ಯಾವುದೂ ನನಗೆ ಬೇಡ.

**ಸಂಪಾದಕ :** ನೀವು ಗಾಬರಿಯಾದಿರಿ. ನಾನು ಹಾಗೆ ಮಾಡಿದರೆ ಆದೀತೆ? ಸ್ವಲ್ಪ ತಡೆದರೆ ನಿಮಗೇನು ಬೇಕೋ ಅದೇ ಬರುತ್ತದೆ. ಒಂದೇ ದಿನದಲ್ಲಿ ಗಿಡ ಬೆಳೆದು ನಿಲ್ಲುವುದಿಲ್ಲ. ನೆನಪಿರಲಿ–ನನ್ನ ಮಾತನ್ನು ತಡೆದಿರಿ. ಹಿಂದೂಸ್ಥಾನದ ಹಿತೈಷಿ[illegible] ಹೆಸರನ್ನು ಕೇಳಲು ಇಷ್ಟವಿಲ್ಲವೆಂದಿರಿ. ಇದರಿಂದ ನಿಮ್ಮ ಪಾಲಿಗಂತೂ ಸ್ವರಾಜ್ಯ [illegible]ಹಳ ದೂರ ಎಂಬುದು ತಿಳಿಯಿತು. ಹಿಂದೂಸ್ಥಾನದಲ್ಲಿ ನಿಮ್ಮಂಥವರೇ ಹೆಚ್ಚು ಜನ ಇದ್ದರೆ ನಾವು ಮುಂಬರಿಯುವುದೇ ಅಸಂಭವ. ಇದನ್ನು ಸ್ವಲ್ಪ ಆಲೋಚಿಸಿ ನೋಡಿ.

**ಓದುಗ :** ಹೀಗೆ ಏನೇನೋ ಬಳಸಿ ಮಾತಾಡಿ ಪ್ರಶ್ನೆಯನ್ನೇ ತಪ್ಪಿಸ ಬೇಕೆಂದಿದ್ದೀರಿ ನೀವು. ನನಗೆ ಹಾಗೆ ಅನಿಸುತ್ತಿದೆ. ನೀವು ಯಾರನ್ನು ಕುರಿತು ಹೇಳುತ್ತೀರೋ ಅವರು ಹಿಂದೂಸ್ಥಾನದ ಹಿತೈಷಿಗಳೆಂದು ನನಗನಿಸುವುದಿಲ್ಲ. ಸುಮ್ಮನೆ ಅವರ ಸುದ್ದಿ ಕೇಳಿ ಲಾಭವೇನು? ನೀವು ಭಾರತದ ಪಿತಾಮಹ ಎಂದಿರಲ್ಲ. ಅವರು ಮಾಡಿದ್ದೇನು ರಾಷ್ಟ್ರಕ್ಕೆ? ಇಂಗ್ಲಿಷ್ ಆಡಳಿತಗಾರರು ನ್ಯಾಯವಾಗಿ ನಡೆಯುತ್ತಾರೆ, ಅವರೊಡನೆ ನಾವು ಸಹಕರಿಸಬೇಕು ಎಂದು ಹೇಳಿದ್ದೇ ತಾನೆ?

**ಸಂಪಾದಕ :** ಈ ಮಹಾಪುರುಷರನ್ನು ಕುರಿತು ನೀವು ಅಗೌರವದ ಮಾತು ಆಡುತ್ತೀರಿ. ಇದು ನಮಗೆ ಲಜ್ಜಾಸ್ಪದವೆಂದು ಬಹಳ ನಮ್ರತೆಯಿಂದ ನಿಮಗೆ ಹೇಳುತ್ತೇನೆ. ಅವರು ಮಾಡಿದ ಕೆಲಸವನ್ನು ನೋಡಿ. ತಮ್ಮ ಬಾಳನ್ನೇ ಅವರು ಹಿಂದೂಸ್ಥಾನದ ಸೇವೆಗಾಗಿ ಮೀಸಲಿಟ್ಟರು. ನಾವು ಕಲಿತಿರುವುದೆಲ್ಲ ಅವರಿಂದಲೇ. ಇಂಗ್ಲಿಷರು ಹಿಂದೂಸ್ಥಾನದ ರಕ್ತವನ್ನು ಹೀರಿದರು ಎಂಬ ಮಾತನ್ನು ಆದರಣೀಯ ದಾದಾಭಾಯಿ ಅಲ್ಲವೆ ನಮಗೆ ಹೇಳಿಕೊಟ್ಟದ್ದು? ಇವೊತ್ತಿಗೂ ಅವರಿಗೆ ಇಂಗ್ಲಿಷರಲ್ಲಿ ನಂಬಿಕೆಯಿದ್ದರೆ, ಇದ್ದ ಮಾತ್ರಕ್ಕೆ, ಏನಾಯಿತು? ಹರೆಯದ ಹುರುಪಿನಲ್ಲಿ ನಾವು ಒಂದು ಹೆಜ್ಜೆ ಮುಂದೆ ಇಡಲು ಸಿದ್ಧರಾದ ಮಾತ್ರಕ್ಕೆ ಅದರಿಂದ ದಾದಾಭಾಯಿಯ ಪೂಜನೆಗೆ ಕುಂದು ಬಂತೆ? ಅದರಿಂದ ನಾವು ಅವರಿಗಿಂತ ಹೆಚ್ಚು ಬುದ್ಧಿವಂತ ರಾದಂತಾಯಿತೆ? ಮೇಲೆ ಹತ್ತಿಬಂದ ಮೇಲೆ ಏಣಿಯನ್ನು ತಳ್ಳಿ ಹಾಕುವುದು ಜಾಣತನವೆ? ಒಂದು ಮೆಟ್ಟಿಲನ್ನು ಕಿತ್ತುಹಾಕಿದರೆ ಇಡೀ ಮೆಟ್ಟಿಲು ಸಾಲೇ ಉರುಳಿ ಬೀಳುತ್ತದೆ. ಎಳೆತನ ದಾಟಿ ಹರೆಯಕ್ಕೆ ನಾವು ಬಂದ ಮೇಲೆ ಎಳೆತನವನ್ನು

ತಿರಸ್ಕರಿಸುತ್ತೇವೆಯೇ? ಇಲ್ಲ. ಬಹಳ ಪ್ರೀತಿಯಿಂದ ಎಳೆತನದ ದಿನಗಳನ್ನು ನೆನೆಯುತ್ತೇವೆ. ಅನೇಕ ವರ್ಷ ಅಧ್ಯಯನ ಮಾಡಿದ ಮೇಲೆ ಒಂದು ವೇಳೆ ಒಬ್ಬ ಅಧ್ಯಾಪಕರು ನನಗೆ ವಿದ್ಯೆ ಹೇಳಿಕೊಟ್ಟು ಆ ತಳಹದಿಯ ಮೇಲೆ ಇನ್ನಿಷ್ಟು ಜ್ಞಾನವನ್ನು ನಾನು ಕಟ್ಟಿಕೊಂಡರೆ, ಆ ಅಧ್ಯಾಪಕರಿಗಿಂತ ನಾನೇ ಜಾಣ ಎನ್ನುತ್ತಾರೆಯೆ? ಅಧ್ಯಾಪಕರಿಗೆ ನಾನು ಸದಾ ಗೌರವ ತೋರಲೇಬೇಕು. ಭಾರತ ಪಿತಾಮಹ ದಾದಾಭಾಯಿ ನೌರೋಜಿಯ ವಿಷಯ ದಲ್ಲೂ ಹೀಗೆ. ನಮ್ಮೊಳಗೆ ರಾಷ್ಟ್ರೀಯ ಭಾವನೆ ಮೊಳೆಯಿಸಿದವರು ಅವರೇ; ಇದನ್ನು ಒಪ್ಪಲೇಬೇಕು.

**ಓದುಗ :** ಚೆನ್ನಾಗಿ ಹೇಳಿದಿರಿ. ದಾದಾಭಾಯಿಗೆ ನಾವು ಗೌರವ ತೋರ ಬೇಕೆಂಬುದು ಈಗ ಅರ್ಥವಾಯಿತು. ಅವರೂ ಅವರಂಥ ಬೇರೆ ಮಹಾ ಪುರುಷರೂ ಕೆಲಸ ಮಾಡಿರದಿದ್ದರೆ, ನಮ್ಮಲ್ಲಿ ಈಗ ಇರುವ ಭಾವನೆ, ಜಾಗೃತಿ ಇರುತ್ತಿರಲಿಲ್ಲವೇನೋ. ಆದರೆ ಪ್ರೊ. ಗೋಖಲೆಯವರ ಬಗ್ಗೆ ಈ ಮಾತನ್ನು ಹೇಳುವುದು ಹೇಗೆ? ಅವರು ಇಂಗ್ಲಿಷರಿಗೆ ದೊಡ್ಡ ಗೆಳೆಯರಾಗಿದ್ದಾರೆ. ಇಂಗ್ಲಿಷರಿಂದ ನಾವು ಬಹಳ ಕಲಿಯಬೇಕಾಗಿದೆ. ಸ್ವರಾಜ್ಯದ ಮಾತೆತ್ತುವ ಮುನ್ನ ಅವರ ರಾಜ್ಯನೀತಿಯನ್ನು ಕಲಿಯಬೇಕು ಎನ್ನುತ್ತಾರೆ ಗೋಖಲೆ. ಅವರ ಭಾಷಣಗಳನ್ನೋದಿ ನನಗೆ ತಲೆ ಚಿಟ್ಟು ಹಿಡಿದಿದೆ.

**ಸಂಪಾದಕ :** ನಿಮಗೆ ಬೇಸರವಾಗಿದ್ದರೆ ಅದಕ್ಕೆ ನಿಮ್ಮ ಗಡಿಬಿಡಿ ಸ್ವಭಾವ ಕಾರಣ. ಆದರೆ, ತಮ್ಮ ತಾಯಿತಂದೆಗಳ ಶಾಂತ ಸ್ವಭಾವಕ್ಕೆ ಬೇಸತ್ತು, ತಮ್ಮ ಜೊತೆಗೆ ತಂದೆ ತಾಯಿಗಳು ಓಡಲಾರರಲ್ಲ ಎಂದು ಸಿಟ್ಟಾದರೆ, ಅಂಥ ಮಕ್ಕಳು ತಂದೆ ತಾಯಿಗಳಿಗೆ ಆದರ ತೋರಿಸಿಲ್ಲ ಎನ್ನುತ್ತೇವೆ. ಪ್ರೊ. ಗೋಖಲೆ ತಾಯಿ ತಂದೆಗಳ ಹಾಗೆ. ನಮ್ಮ ಜೊತೆಗೆ ಅವರು ಓಡಲಾರದಿದ್ದರೆ ಏನಂತೆ? ಸ್ವರಾಜ್ಯವನ್ನು ಬಯಸಿದ ರಾಷ್ಟ್ರ ತನ್ನ ಹಿರಿಯರನ್ನು ತಿರಸ್ಕರಿಸಲಾರದು. ಹಿರಿಯರಿಗೆ ಗೌರವ ತೋರುವ ಸ್ವಭಾವ ಅಳಿದು ಹೋದರೆ ನಾವು ವ್ಯರ್ಥರಾದೇವು. ಪರಿಪಕ್ವ ಬುದ್ಧಿಯವರು ಸ್ವರಾಜ್ಯ ನಡೆಸಬಲ್ಲರು, ಉಚ್ಛೃಂಖಲರು ಅವಸರಗಾರರು ಅಲ್ಲ. ಪ್ರೊ. ಗೋಖಲೆ ಭಾರತೀಯ ಶಿಕ್ಷಣಕ್ಕಾಗಿ ತಮ್ಮನ್ನು ಸಮರ್ಪಿಸಿಕೊಂಡ ಕಾಲದಲ್ಲಿ ಅವರಂಥವರು ಎಷ್ಟು ಜನ ಇದ್ದರು. ಪ್ರೊ. ಗೋಖಲೆಯವರು ಮಾಡುವುದನ್ನೆಲ್ಲ ಶುದ್ಧಭಾವದಿಂದ, ಹಿಂದೂಸ್ಥಾನದ ಕಲ್ಯಾಣಕ್ಕಾಗಿಯೆ ಮಾಡುತ್ತಾರೆ. ನನಗೆ

ನಂಬಿಕೆಯಿದೆ. ಅಗತ್ಯವಾದರೆ ತಮ್ಮ ಪ್ರಾಣವನ್ನೇ ಒಪ್ಪಿಸುವಷ್ಟು ದೇಶಭಕ್ತಿ ಅವರದು, ಅವರು ಏನಾದರೂ ಹೇಳಿದರೆ, ಅದು ಇತರರನ್ನು ಹೊಗಳಲಿಕ್ಕಲ್ಲ. ತಮಗೆ ಅದು ಸರಿ ಎಂದು ತೋಚಿದುದರಿಂದ ಹೇಳುತ್ತಾರೆ. ಆದ್ದರಿಂದ ಅವರನ್ನು ನಾವು ಗೌರವಿಸಬೇಕು.

**ಓದುಗ :** ಹಾಗಾದರೆ ಅವರು ಹೇಳಿದ್ದನ್ನೆಲ್ಲಾ ಮಾಡಬೇಕೆ?

**ಸಂಪಾದಕ :** ಹಾಗೆಂದಿಗೂ ನನ್ನ ಅಭಿಪ್ರಾಯವಲ್ಲ. ಅವರಿಗೂ ನಮಗೂ ಮತಭೇದ ಸತ್ಯವಾದುದು. ಆದರೆ, ನಿಮ್ಮ ಅಂತರಾತ್ಮ ಹೇಳಿದಂತೆ ನಡೆಯಿರಿ ಎಂದು ಅವರೇ ನಮಗೆ ಸಲಹೆ ಕೊಡುತ್ತಾರೆ. ನಮ್ಮ ಮುಖ್ಯ ಉದ್ದೇಶ್ಯ ಅವರ ಕೆಲಸವನ್ನು ನಿಂದಿಸುವುದಲ್ಲ; ನಮಗಿಂತ ಅವರು ಹಿರಿಯರು. ಅವರ ಮುಂದೆ ಹಿಂದೂಸ್ಥಾನದ ಸೇವೆ ನಾವು ಮಾಡಿದ್ದೇನೂ ಇಲ್ಲ ಎಂದು ದೃಢವಾಗಿ ಅರಿತು ಕೊಳ್ಳುವುದು. ಹಲವು ಪತ್ರಿಕೆಗಳು ಅವರನ್ನು ಕುರಿತು ಅಸಭ್ಯ ಮಾತನ್ನು ಬರೆಯುತ್ತವೆ. ಅಂಥ ಬರವಣಿಗೆಯನ್ನು ನಾವು ವಿರೋಧಿಸಬೇಕು. ಪ್ರೊ. ಗೋಖಲೆಯಂಥವರು ಸ್ವರಾಜ್ಯದ ಮೂಲ ಸ್ತಂಭಗಳೆಂದು ತಿಳಿಯಬೇಕು. ಇತರರ ವಿಚಾರ ತಪ್ಪು. ನಮ್ಮ ವಿಚಾರವೇ ಶ್ರೇಷ್ಠ, ನಮ್ಮ ವಿಚಾರದಂತೆ ನಡೆಯದವರೇ, ದೇಶದ ವೈರಿಗಳು ಎಂದು ತಿಳಿಯುವುದು ಸರಿಯಲ್ಲ.

**ಓದುಗ :** ಈಗಲೀಗ ನಿಮ್ಮ ಮಾತು ಸ್ವಲ್ಪ ಅರ್ಥವಾಗುತ್ತಿದೆ. ಇನ್ನೂ ಸ್ವಲ್ಪ ಆಲೋಚಿಸಬೇಕು. ಆದರೆ ಮಿ. ಹ್ಯೂಮ್, ಸರ್ ವಿಲಿಯಂ ವೆಡರ್‌ಬರ್ನ್ ಮುಂತಾದವರ ಬಗ್ಗೆ ನೀವು ಹೇಳಿದುದು ಅರ್ಥವಾಗಲಿಲ್ಲ.

**ಸಂಪಾದಕ :** ಭಾರತೀಯರ ಬಗ್ಗೆ ಹೇಳಿದ ಮಾತೇ ಇಂಗ್ಲಿಷರಿಗೂ. ಇಂಗ್ಲಿಷರೆಲ್ಲರೂ ಕೆಟ್ಟವರೆಂಬುದನ್ನು ನಾನು ಎಂದಿಗೂ ಒಪ್ಪಲಾರೆ. ಹಿಂದೂಸ್ಥಾನಕ್ಕೆ ಸ್ವರಾಜ್ಯ ಸಿಗಲಿ ಎಂದು ಬಯಸುವ ಇಂಗ್ಲಿಷರು ಎಷ್ಟೋ ಜನರಿದ್ದಾರೆ. ಉಳಿದವರಿಗಿಂತ ಇಂಗ್ಲಿಷರು ಹೆಚ್ಚು ಸ್ವಾರ್ಥಿಗಳು, ನಿಜ. ಅದರಿಂದ ಇಂಗ್ಲಿಷರೆಲ್ಲ ದುಷ್ಟರೆಂದಾಗುವುದಿಲ್ಲ. ನಾವು ನ್ಯಾಯವನ್ನು ಬಯಸುವವರು, ಪರರಿಗೂ ನ್ಯಾಯ ತೋರಬೇಕು. ಸರ್ ವಿಲಿಯಂ ವೆಡರ್‌ಬರ್ನ್ ಹಿಂದೂಸ್ಥಾನದ ಅಹಿತವನ್ನು ಬಯಸರು. ನಮಗೆ ಅದೇ ಹೆಚ್ಚು. ಮುಂಬರಿದ ಮೇಲೆ ನಿಮಗೆ ತಿಳಿದೀತು,

ನಾವು ನ್ಯಾಯವಾಗಿ ನಡೆದರೆ ಹಿಂದೂಸ್ಥಾನದ ಗುಲಾಮಗಿರಿ ಬೇಗ ಕಳೆದೀತು. ಪ್ರತಿಯೊಬ್ಬ ಇಂಗ್ಲಿಷನೂ ನಮ್ಮ ವೈರಿಯೆ ಎಂದು ನಾವು ತಿಳಿದರೆ ಸ್ವರಾಜ್ಯ ದೂರ ಸರಿದೀತು. ಅವರೊಡನೆಯೂ ನಾವು ನ್ಯಾಯವಾಗಿ ನಡೆದುಕೊಂಡರೆ ಸ್ವರಾಜ್ಯ ಸಂಪಾದನೆಯಲ್ಲಿ ಅವರು ನಮಗೆ ನೆರವಾದಾರು.

**ಓದುಗ :** ಸದ್ಯ, ಇದೆಲ್ಲವೂ ವ್ಯರ್ಥ ಪ್ರಲಾಪವಾಗಿ ಕಾಣುತ್ತಿದೆ ನನಗೆ. ಸ್ವರಾಜ್ಯ ಸಂಪಾದನೆಯಲ್ಲಿ ಇಂಗ್ಲಿಷರ ನೆರವು ಆಗುವುದಂತೂ ವಿಪರೀತ ಅಭಾಸದ ಮಾತು. ನಮಗೆ ಸ್ವರಾಜ್ಯ ಬರುವುದು ಇಂಗ್ಲಿಷರಿಗೆ ಸಹಿಸೀತೆ? ಆದರೆ, ಈ ಪ್ರಶ್ನೆಯಲ್ಲಿ ಕಾಲ ಕಳೆಯುವುದು ನನಗೆ ಬೇಡ. ಮೊದಲು ನೀವು ಸ್ವರಾಜ್ಯ ಪ್ರಾಪ್ತಿಯ ಉಪಾಯ ಹೇಳಿ. ಆಗ ನಿಮ್ಮ ವಿಚಾರ ದೃಷ್ಟಿ ನನಗೆ ಅರ್ಥವಾದೀತು. ಇಂಗ್ಲಿಷರ ಸಹಾಯದ ಮಾತನ್ನೆತ್ತಿ ನೀವು ನಿಮ್ಮ ಅಭಿಪ್ರಾಯಗಳ ವಿಷಯದಲ್ಲಿ ನನಗೆ ಸಂದೇಹ ಹುಟ್ಟಿಸಿದಿರಿ. ಆದ್ದರಿಂದ, ಈ ಮಾತನ್ನು ಇಲ್ಲಿಗೇ ಬಿಡೋಣ.

**ಸಂಪಾದಕ :** ನನಗೂ ಅದನ್ನು ಬೆಳೆಸುವ ಇಷ್ಟವಿಲ್ಲ. ನನ್ನ ಬಗ್ಗೆ ನಿಮಗೆ ಸಂದೇಹ ಹುಟ್ಟಿದರೂ ಚಿಂತೆಯಿಲ್ಲ. ಅಪ್ರಿಯವಾದ್ದನ್ನು ಮೊದಲೇ ಹೇಳುವುದು ಸರಿ. ಆಮೇಲೆ ಶಾಂತವಾಗಿ ನಿಮ್ಮ ಸಂದೇಹಗಳನ್ನು ದೂರ ಮಾಡುವುದು ನನ್ನ ಕೆಲಸ.

**ಓದುಗ :** ನಿಮ್ಮ ಈ ಮಾತು ಒಪ್ಪಿತು. ಇದರಿಂದ ನನಗೆ ಒಪ್ಪಿದ ಮಾತನ್ನು ಹೇಳಲು ಧೈರ್ಯ ಬರುತ್ತದೆ. ಆದರೂ ಒಂದು ಮಾತು ಇನ್ನೂ ಸಂದೇಹ ವಾಗಿಯೇ ಇದೆ. ಕಾಂಗ್ರೆಸ್ಸು ಸ್ವರಾಜ್ಯಕ್ಕೆ ತಳಹದಿ ಹಾಕಿತು ಎಂಬುದು ಹೇಗೆ?

**ಸಂಪಾದಕ :** ನೋಡಿ. ಕಾಂಗ್ರೆಸ್ಸು ಹಿಂದೂಸ್ಥಾನದ ಬೇರೆ ಬೇರೆ ಪ್ರಾಂತ ಗಳವರನ್ನು ಒಟ್ಟಿಗೆ ಸೇರಿಸಿ ಅವರಲ್ಲಿ ಒಂದು ರಾಷ್ಟ್ರೀಯ ಭಾವನೆಯನ್ನು ತುಂಬಿತು. ಕಾಂಗ್ರೆಸ್ಸಿನ ಮೇಲೆ ಸರಕಾರಕ್ಕೆ ಸದಾ ಉರಿಗಣ್ಣೇಕೆ? ರಾಷ್ಟ್ರದ ಆಯ-ವ್ಯಯದ ಯಾಜಮಾನ್ಯ ಜನತೆಯ ಕೈಯಲ್ಲೇ ಇರಬೇಕೆಂದು ಕಾಂಗ್ರೆಸ್ಸು ಸದಾ ಒತ್ತಾಯ ಮಾಡುತ್ತಿದೆ. ಕೆನಡಾದ ಮಾದರಿಯ ಸ್ವರಾಜ್ಯವನ್ನು ಯಾವಾಗಲೂ ಬೇಡಿದೆ. ನಮಗದು ಲಭಿಸೀತೋ ಇಲ್ಲವೋ, ನನಗೆ ಅದು ಬೇಕೋ ಬೇಡವೋ, ಅದಕ್ಕಿಂತ ಉತ್ತಮವಾದುದು ಬೇರೆ ಇದೆಯೋ ಇಲ್ಲವೋ ಎಂಬುದೆಲ್ಲ ಬೇರೆ

ಮಾತು. ನಾನು ಹೇಳಬೇಕಾದುದು ಇಷ್ಟು; ಹಿಂದೂಸ್ಥಾನಕ್ಕೆ ಸ್ವರಾಜ್ಯದ ರುಚಿ ತೋರಿಸಿತು. ಈ ಶ್ರೇಯಸ್ಸನ್ನು ಅದಕ್ಕೆ ಸಲ್ಲಿಸದಿರುವುದು ಅನುಚಿತ. ನಾವು ಹಾಗೆ ಮಾಡುವುದು ಕೃತಘ್ನತೆ ಮಾತ್ರವೇ ಅಲ್ಲ, ನಮ್ಮ ಉದ್ದೇಶ್ಯ ಸಾಧನೆಗೇ ಬಾಧಕ. ಸ್ವರಾಜ್ಯ ಪ್ರಾಪ್ತಿಗೆ ಕಾಂಗ್ರೆಸ್ಸು ಅಡ್ಡಿ ಎಂದು ತಿಳಿದರೆ, ಅದರ ಉಪಯೋಗ ನಮಗಿಲ್ಲದಾಗುತ್ತದೆ.



## ಅಧ್ಯಾಯ – 2

# ಬಂಗಾಳದ ವಿಭಜನೆ

**ಓದುಗ :** ನೀವು ಹೇಳಿದುದನ್ನು ಕೇಳಿದರೆ ಕಾಂಗ್ರೆಸ್ಸು ಸ್ವರಾಜ್ಯದ ತಳಹದಿ ಹಾಕಿತು ಎನ್ನುವುದು ಸರಿ. ಆದರೆ ಅದು ನಿಜವಾದ ಜಾಗೃತಿಯೆನ್ನಲು ಆಗದೆಂದು ನೀವೂ ಒಪ್ಪುತ್ತೀರಲ್ಲವೆ? ನಿಜವಾದ ಜಾಗೃತಿ ಯಾವಾಗ ಆಯಿತೋ, ಹೇಗೆ ಆಯಿತೋ ಹೇಳುತ್ತೀರಾ?

**ಸಂಪಾದಕ :** ಬೀಜ ಎಂದೂ ಕಾಣಿಸುವುದೇ ಇಲ್ಲ. ಬೀಜ ಮಣ್ಣಿನ ಕೆಳಗೆ ತನ್ನ ಕೆಲಸ ಮಾಡಿ ನಷ್ಟವಾಗುತ್ತದೆ. ಆಗ ಸಸಿ ಮೊಳೆತು ನೆಲದ ಮೇಲೆ ಕಾಣಿಸುತ್ತದೆ. ಕಾಂಗ್ರೆಸ್ಸಿನದೂ ಹೀಗೇ. ನಿಜವಾದ ಜಾಗೃತಿ ಎಂದು ನೀವು ತಿಳಿದಿರುವುದು ವಂಗಭಂಗದಿಂದ ಹುಟ್ಟಿತು. ಅದಕ್ಕಾಗಿ ನಾವು ಲಾರ್ಡ್ ಕರ್ಜನ್‌ಗೆ ಧನ್ಯವಾದ ಕೊಡಬೇಕು. ವಂಗಭಂಗದ ಸಮಯದಲ್ಲಿ ಬಂಗಾಳಿಗಳು ಲಾರ್ಡ್ ಕರ್ಜನ್‌ನನ್ನು ಬಹಳ ಬೇಡಿಕೊಂಡರು, ಅಂಗಲಾಚಿದರು. ಅಧಿಕಾರ ಮದದಿಂದ ಅವನು ಯಾರ ಮಾತನ್ನೂ ಕೇಳಲಿಲ್ಲ. ಇವರು ಭಾರತೀಯರು, ನಾಲ್ಕು ಮಾತು ಬಡಬಡಿಸುತ್ತಾರೆ. ಮತ್ತೇನೂ ಆಗದು ಹೋಗದು ಇವರ ಕೈಯಲ್ಲಿ ಎಂದು ಆತ ತಿಳಿದ. ಆದ್ದರಿಂದಲೇ ಇಷ್ಟೆಲ್ಲ ವಿರೋಧವಿದ್ದರೂ ಬಹಳ ಗರ್ವದಿಂದ ನಿರಾದರದಿಂದ ವಂಗಭಂಗದ ನಾದಿರಷಾಹಿ ಅಪ್ಪಣೆಕೊಟ್ಟ. ಇಂಗ್ಲಿಷರ ಸತ್ತೆಗೆ ತಗುಲಿದಂಥ ಪೆಟ್ಟು ಮತ್ತಾವುದರಿಂದಲೂ ತಗಲಲಿಲ್ಲ. ಹಿಂದೂಸ್ಥಾನಕ್ಕೆ ಇಂಗ್ಲಿಷರು ಮಾಡಿದ ಬೇರೆ ಅನ್ಯಾಯಗಳು ವಂಗಭಂಗಕ್ಕಿಂತ ಕಡಿಮೆ ಯೆಂದಲ್ಲ. ಉಪ್ಪುಗಂದಾಯವೇನು ಚಿಕ್ಕ ಅನ್ಯಾಯವೆ? ಮುಂದೆ ಇಂಥ ಸಂಗತಿ ಇನ್ನೂ ಅನೇಕ ತಿಳಿಯುತ್ತವೆ. ಒಂದು ಮಾತ್ರ ನಿಜ. ವಂಗಭಂಗವನ್ನು ವಿರೋಧಿಸಲು ಜನತೆ ಸಿದ್ಧವಾಗಿತ್ತು. ಆಗ ದೇಶದಲ್ಲಿ ಬಹಳ ಉತ್ಸಾಹವಿತ್ತು.

ಬಂಗಾಳಿ ನಾಯಕರನೇಕರು ತಮ್ಮ ಸರ್ವಸ್ವವನ್ನೂ ಹೋಮ ಮಾಡಲು ಸಿದ್ಧರಾಗಿದ್ದಾರೆ. ಅವರಿಗೆ ತಮ್ಮ ಶಕ್ತಿ ಸಾಮರ್ಥ್ಯಗಳ ಅರಿವು ಇತ್ತು. ಆದ್ದರಿಂದ ಒಮ್ಮೆಲೇ ಧಗ್ ಎಂದು ಉರಿಯಿತು. ಆ ಬೆಂಕಿ ಈಗ ಆರುವಂತಿಲ್ಲ. ಅದನ್ನು ಆರಿಸುವ ಅಗತ್ಯವೂ ಇಲ್ಲ. ವಂಗಭಂಗದ ಅಪ್ಪಣೆ ಅಳಿದು ಬಂಗಾಳ ಮತ್ತೆ ಒಂದಾದೀತು. ಆದರೆ, ಇಂಗ್ಲಿಷರ ಹಡಗಿನಲ್ಲಿ ಬಿದ್ದ ತೂತನ್ನು ಮಾತ್ರ ಮುಚ್ಚಲು ಸಾಧ್ಯವಿಲ್ಲ. ದಿನದಿನಕ್ಕೆ ಅದು ಅಗಲವಾದೀತು. ಎಚ್ಚೆತ್ತ ಹಿಂದೂಸ್ಥಾನ ಮತ್ತೆ ನಿದ್ರಿಸಲು ಸಾಧ್ಯವಿಲ್ಲ. ವಂಗಭಂಗವನ್ನು ಅಳಿಸಿಹಾಕಿ ಎಂಬ ಬೇಡಿಕೆ ಒಂದು ರೀತಿಯಲ್ಲಿ ಸ್ವರಾಜ್ಯದ ಬೇಡಿಕೆಯೇ-ಬಂಗಾಳದ ನಾಯಕರಿಗೆ ಇದು ಗೊತ್ತು. ಇಂಗ್ಲಿಷ್ ಅಧಿಕಾರಿಗಳೂ ಇದನ್ನು ಅರಿತಿದ್ದಾರೆ. ಆದ್ದರಿಂದಲೇ ವಂಗಭಂಗವಿನ್ನೂ ಅಳಿದಿಲ್ಲ. ಆದರೆ ಕಾಲ ಕಳೆದಂತೆಲ್ಲ ರಾಷ್ಟ್ರ ಬಲಗೊಳ್ಳುತ್ತಿದೆ. ರಾಷ್ಟ್ರಗಳ ಸಂಘಟನೆ ಒಂದು ದಿನದಲ್ಲಿ ಆಗುವ ಮಾತಲ್ಲ. ಅದಕ್ಕೆ ಹಲವಾರು ವರ್ಷ ಬೇಕು.

**ಓದುಗ :** ನಿಮಗೆ ತಿಳಿದಂತೆ ವಂಗಭಂಗದ ಪರಿಣಾಮವೇನಾಯಿತು?

**ಸಂಪಾದಕ :** ನಮ್ಮ ದೂರುಗಳನ್ನೆಲ್ಲ ಸಾಮ್ರಾಟನ ತನಕ ಮುಟ್ಟಿಸಬೇಕು; ಅಲ್ಲಿ ನಮ್ಮ ಕೂಗಿಗೆ ಯಾರೂ ಕಿವಿಗೊಡದಿದ್ದರೆ ತೆಪ್ಪಗೆ ಕೂಡಬೇಕು. ಯಾವಾಗಲಾದರೂ ಒಂದೊಂದು ಸಲ ಅರ್ಜಿ ಕೊಡುತ್ತಿರಬೇಕು ಎಂದು ಇಲ್ಲಿಯವರೆಗೆ ನಾವು ತಿಳಿದಿದ್ದೆವು. ಆದರೆ ವಂಗಭಂಗದ ತರುವಾಯ ನಮ್ಮ ದರಖಾಸ್ತಿನ ಹಿಂದೆ ಶಕ್ತಿ ಬೇಕು. ಇದಕ್ಕಾಗಿ ಜನರಲ್ಲಿ ಕಷ್ಟವನ್ನು ಸಹಿಸುವ ಸಾಮರ್ಥ್ಯ ಬೇಕು ಎಂಬುದನ್ನು ಜನರು ಅರಿತರು. ಈ ಹೊಸ ಭಾವನೆಯೆ, ವಂಗಭಂಗದ ಫಲ ಎನ್ನಬೇಕು. ಪತ್ರಿಕೆಗಳ ಸ್ಪಷ್ಟ ಲೇಖನಗಳಲ್ಲಿ ಈ ಹೊಸ ಭಾವನೆ ವ್ಯಕ್ತವಾಗತೊಡಗಿತು. ಅಂಜಿಕೆಯಿಂದ ಗುಟ್ಟಾಗಿ ನಡುನಡುಗುತ್ತ ಆಡುತ್ತಿದ್ದ ಮಾತು ಈಗ ಬಹಿರಂಗವಾಗಿ ಮಾತಿನಲ್ಲಿ ಬರವಣಿಗೆಯಲ್ಲಿ ಪ್ರಕಟವಾಯಿತು. ಸ್ವದೇಶೀ ಚಳವಳಿ ಮೊದಲಾಯಿತು. ಇಂಗ್ಲಿಷರನ್ನು ಕಂಡ ಕೂಡಲೆ ಬೆದರಿ ಓಡುತ್ತಿದ್ದ ಆಬಾಲವೃದ್ಧರು ತಮ್ಮ ಅಂಜಿಕೆ ಬಿಟ್ಟರು. ಜಗಳ, ಹೊಡೆದಾಟ ಸೆರೆಮನೆ ಯಾವುದಕ್ಕೂ ಅಂಜರು. ಭಾರತದ ಶ್ರೇಷ್ಠ ಪುತ್ರರು ಹಲವರು ದೇಶಭ್ರಷ್ಟರಾಗಿ ಅಲೆಯುತ್ತಿದ್ದಾರೆ. ಅರ್ಜಿ-ಬಿನ್ನವತ್ತಳೆಗಳಲ್ಲ ಇದು; ಇದೇ ಬೇರೆ.

ಹೀಗೆ ಜನರಲ್ಲಿ ಸಂಚಲನವಾಗುತ್ತಿದೆ. ಬಂಗಾಳದ ಗಾಳಿ ಉತ್ತರದಲ್ಲಿ ಪಂಜಾಬಿನವರೆಗೆ ದಕ್ಷಿಣದಲ್ಲಿ ಕನ್ಯಾಕುಮಾರಿಯವರೆಗೆ ಬೀಸುತ್ತಿದೆ.

**ಓದುಗ :** ಇದಲ್ಲದೆ ಇನ್ನೂ ಏನಾದರೂ ವಿಶೇಷ ಪರಿಣಾಮವಾಯಿತೆ?

**ಸಂಪಾದಕ :** ಇಂಗ್ಲಿಷರ ಹಡಗಿನಲ್ಲಿ ತೂತು ಮಾಡಿದಂತೆ ವಂಗಭಂಗ ನಮ್ಮೊಳಗೂ ಒಡಕನ್ನು ಮಾಡಿತು. ಮಹಾ ಘಟನೆಗಳ ಪರಿಣಾಮವೂ ಮಹತ್ತರವೇ. ನಮ್ಮ ನಾಯಕರಲ್ಲಿ ಮಿತವಾದಿ. ಉಗ್ರವಾದಿ ಎಂದು ಎರಡು ಗುಂಪಾದವು. ಒಂದು ನಿಧಾನದ ಪಕ್ಷ, ಇನ್ನೊಂದು ಅವಸರದ ಪಕ್ಷ ಎನ್ನಬಹುದು. ಮಿತವಾದಿಗಳು ಹೇಡಿಗಳ ಗುಂಪು, ಉಗ್ರವಾದಿಗಳದು ಧೀರರ ಗುಂಪು ಎಂದರು ಕೆಲವರು. ತಮ್ಮ ತಮ್ಮ ರುಚಿಯಂತೆ ಈ ಶಬ್ದಗಳಿಗೆ ಅರ್ಥ ಹೊಸೆದರು. ಆದರೆ, ಇಷ್ಟು ಮಾತ್ರ ನಿಜ. ಈ ಪಕ್ಷಗಳಲ್ಲಿ ಪರಸ್ಪರ ವೈರವೇ ಹುಟ್ಟಿದೆ. ಪರಸ್ಪರ ಅವಿಶ್ವಾಸದಿಂದ ಒಂದನ್ನೊಂದು ನಿಂದಿಸುತ್ತವೆ. ಸೂರತ್ ಕಾಂಗ್ರೆಸ್ಸಿನಲ್ಲಿ ಇಬ್ಬರ ನಡುವೆ ಹೊಡೆದಾಟವೆ ಆಯಿತು. ಈ ಪಕ್ಷರಂಜನೆ ದೇಶಕ್ಕೆ ಹಿತಕರವಲ್ಲ. ಈ ಪಕ್ಷ ಭೇದಗಳು ಬಹುಕಾಲ ಇರಲಾರದೆಂದು ನನಗನಿಸುತ್ತದೆ. ಎಷ್ಟುಕಾಲ ಹೀಗಿದ್ದೀತೆಂಬುದು ನಾಯಕರನ್ನೂ ಅವಲಂಬಿಸಿದೆ.

■

## ಅಧ್ಯಾಯ – 3

# ಅಸಂತೋಷ, ಅಶಾಂತಿ

**ಓದುಗ :** ವಂಗಭಂಗ ನಮ್ಮ ಜಾಗೃತಿಗೆ ಕಾರಣ ಎನ್ನುತ್ತೀರಿ. ಹಾಗಾದರೆ ಅದರಿಂದ ಹುಟ್ಟಿದ ಅಶಾಂತಿ ಒಳ್ಳೆಯದು ಎನ್ನುತ್ತೀರಾ?

**ಸಂಪಾದಕ :** ನಿದ್ದೆಯಿಂದೆದ್ದಾಗ ಮನುಷ್ಯ ಆಲಸ್ಯದಿಂದ ಮೈಮುರಿಯುತ್ತಾನೆ. ಅಶಾಂತನಂತೆ ಕಾಣುತ್ತಾನೆ. ಆ ಜಡತೆ ಕಳೆಯಲು ಸ್ವಲ್ಪ ಕಾಲ ಬೇಕು. ಆಗ ಪೂರ ಎಚ್ಚರಗೊಳ್ಳುತ್ತಾನೆ. ಇದೇ ರೀತಿ ವಂಗಭಂಗದಿಂದ ಜಾಗೃತಿಯೇನೋ ಆಯಿತು. ಆದರೆ ಇನ್ನೂ ನಮ್ಮ ಆಲಸ್ಯ ಕಳೆದಿಲ್ಲ. ಇನ್ನೂ ಮೈಮುರಿಯುತ್ತಲೇ ಇದೇವೆ, ಅಶಾಂತಿಯಲ್ಲೇ ಇದೇವೆ. ನಿದ್ದೆಗೂ ಎಚ್ಚರಕ್ಕೂ ನಡುವೆ ಒಂದು ಅವಸ್ಥೆಯಿದೆ. ಅದು ಅವಶ್ಯಕ. ಹಾಗೇ ಹಿಂದೂಸ್ಥಾನದಲ್ಲಿ ಈಗ ಹಬ್ಬಿರುವ ಅಶಾಂತಿ ಅವಶ್ಯಕವೆ. ಅಶಾಂತಿಯಿದೆ ಎಂಬ ಅರಿವೇ ಶಾಂತಿಯನ್ನು ತರಬಲ್ಲದು. ನಿದ್ದೆಯಿಂದ ಎದ್ದವನು ಜನ್ಮವೆಲ್ಲ ಮೈಮುರಿಯುತ್ತಲೆ ಇರಲಾರ. ತನ್ನ ಶಕ್ತಿಗೆ ಅನುಸಾರ, ಒಂದು ಗಳಿಗೆ ಹಿಂದೆ ಮುಂದೆ ಪೂರಾ ಎಚ್ಚರಗೊಳ್ಳುತ್ತಾನೆ. ಈ ಅಶಾಂತಿಯಿಂದಲೂ ನಾವು ಬಿಡುಗಡೆಯಾಗುತ್ತೇವೆ. ಅಶಾಂತಿ ಯಾರಿಗೂ ಒಳ್ಳೆಯದು ಎನಿಸದು.

**ಓದುಗ :** ಅಶಾಂತಿಯ ಇನ್ನೊಂದು ರೂಪವೇನು?

**ಸಂಪಾದಕ :** ಅಶಾಂತಿಯೆಂದರೆ ಅಸಂತೋಷ, ಕಾಂಗ್ರೆಸ್ಸಿನ ಕಾಲದಲ್ಲಿ ಇದನ್ನು ಅಸಂತೋಷ ಎನ್ನುತ್ತಿದ್ದರು. ಈಗ ಅಶಾಂತಿ ಎನ್ನುತ್ತಾರೆ. ಹಿಂದೂಸ್ಥಾನದಲ್ಲಿ ಅಸಂತೋಷ ಹರಡಬೇಕಾದುದು ಅವಶ್ಯಕವೆಂದು ಮಿ. ಹ್ಯೂಮ್ ಯಾವಾಗಲೂ ಹೇಳುತ್ತಿದ್ದರು. ಈ ಅಸಂತೋಷ ಬಹಳ

ಉಪಯೋಗಕರವಾದುದು. ಮನುಷ್ಯ ತನ್ನ ಈಗಿನ ಸ್ಥಿತಿಯಲ್ಲಿ ಸಂತುಷ್ಟನಾಗಿದ್ದರೆ ಅದನ್ನು ಬಿಟ್ಟು ಹೊರಗೆ ಬರಲು ಹೇಳುವುದು ಕಷ್ಟ. ಆದ್ದರಿಂದ ಏನು ಸುಧಾರಣೆಯಾಗಬೇಕಾದರೂ ಮೊದಲು ಅಸಂತೋಷವಾಗಬೇಕು. ನಮ್ಮಲ್ಲಿರುವ ವಸ್ತುಗಳನ್ನು ತೆಗೆದೆಸೆಯಬೇಕಾದರೆ ಅದರ ಬಗ್ಗೆ ನಮಗೆ ಬೇಸರ ಹುಟ್ಟಿರಬೇಕು. ಭಾರತೀಯ ಹಾಗೂ ಇಂಗ್ಲಿಷ್ ಮಹಾಪುರುಷರು ಬರೆದ ಗ್ರಂಥಗಳನ್ನು ಓದಿದ ಮೇಲೆ ನಮಗೀ ಅಸಂತೋಷ ಹುಟ್ಟಿತು. ಅಸಂತೋಷದಿಂದ ಅಶಾಂತಿ. ಆ ಅಶಾಂತಿಯ ಬೆಂಕಿಯಲ್ಲಿ ಅನೇಕರು ಸತ್ತರು, ಅನೇಕರು ಸೆರೆ ಸೇರಿದರು. ಹಲವರು ಗಡೀಪಾರಾದರು. ಇನ್ನು ಇದೇ ಪರಿಸ್ಥಿತಿಯಿದ್ದೀತು, ಇರಲೇಬೇಕು, ಇವೆಲ್ಲವೂ ಶುಭ ಚಿಹ್ನೆಗಳೆಂದು ತಿಳಿಯಬೇಕು. ಆದರೆ, ಇವುಗಳ ಪರಿಣಾಮ ಕೆಟ್ಟದೂ ಆಗಬಹುದು.



# ಅಧ್ಯಾಯ – 4

## ಸ್ವರಾಜ್ಯ ಎಂದರೇನು?

**ಓದುಗ :** ಹಿಂದೂಸ್ಥಾನವನ್ನು ಒಂದು ರಾಷ್ಟ್ರವಾಗಿ ಮಾಡಲು ಕಾಂಗ್ರೆಸ್ಸೇನು ಮಾಡಿತೋ, ವಂಗಭಂಗದಿಂದ ಜಾಗೃತಿ ಹೇಗಾಯಿತೋ, ಅಸಂತೋಷ ಅಶಾಂತಿಗಳ ಪ್ರಚಾರ ದೇಶದಲ್ಲಿ ಹೇಗೆ ಆಯಿತೋ ಎಲ್ಲವನ್ನೂ ಅರಿತೆ; ಇನ್ನು ಸ್ವರಾಜ್ಯದ ಬಗ್ಗೆ ನಿಮ್ಮ ವಿಚಾರಗಳನ್ನು ಅರಿಯಬಯಸುತ್ತೇನೆ. ನನ್ನ ವಿಚಾರಕ್ಕೂ ನಿಮ್ಮ ವಿಚಾರಕ್ಕೂ ಇದರಲ್ಲಿ ಹೊಂದಿಕೆಯಿಲ್ಲವೇನೋ ಎಂದು ನನಗೆ ಭಯ.

**ಸಂಪಾದಕ :** ನನ್ನ ಅರ್ಥ ನಿಮ್ಮ ಅರ್ಥ ಬೇರೆ ಬೇರೆಯಿದ್ದರೂ ಇರಬಹುದು. ನಾನೂ ನೀವೂ ಎಲ್ಲರೂ ಸ್ವರಾಜ್ಯಕ್ಕಾಗಿ ಹಾತೊರೆಯುತ್ತಿದ್ದೇವೆ. ಆದರೆ ಸ್ವರಾಜ್ಯ ಎಂದರೇನೋ ಯಾರೂ ನಿಶ್ಚಯಮಾಡಿಲ್ಲ. ಇಂಗ್ಲಿಷರನ್ನು ಹಿಂದೂಸ್ಥಾನದಿಂದ ಓಡಿಸುವ ಮಾತು ಅನೇಕರ ಬಾಯಲ್ಲಿ ಬರುತ್ತಿದೆ. ಆದರೆ ಹಾಗೇಕೆ ಮಾಡಬೇಕೆಂದು ಅನೇಕರು ಯೋಚಿಸಿದಂತೆ ಕಾಣದು. ನಿಮ್ಮನ್ನೇ ಕೇಳೋಣ. ನಮಗೆ ಬೇಕಾದುದನ್ನೆಲ್ಲ ಒಂದು ವೇಳೆ ಅವರು ಕೊಟ್ಟರೆ, ಆಮೇಲೆಯೂ ಇಂಗ್ಲಿಷರನ್ನು ಓಡಿಸುವುದು ಅಗತ್ಯವೇ?

**ಓದುಗ :** ಅವರಿಗೆ ನಾನು ಒಂದೇ ಮಾತು ಹೇಳುತ್ತೇನೆ: 'ದಯೆಯಿಟ್ಟು ನಮ್ಮ ದೇಶವನ್ನು ಬಿಟ್ಟು ಹೊರಡಿ'. ಅವರು ಇದಕ್ಕೊಪ್ಪಿದರೆ, ಅವರು ಹೊರಟುಹೋಗುವುದು ಎಂದರೆ ಇನ್ನೂ ಹಿಂದೂಸ್ಥಾನದಲ್ಲೇ ಇರುವುದು ಎಂದು ಅರ್ಥಮಾಡಿದರೂ ನನಗೇನು ಅಡ್ಡಿಯಿಲ್ಲ. ನಮ್ಮ ಭಾಷೆಯಲ್ಲಿ "ಹೋದರು" ಎಂಬುದಕ್ಕೆ ಅವರ ಭಾಷೆಯಲ್ಲಿ 'ಇದಾರೆ' ಎನ್ನೋಣ ಬೇಕಾದರೆ.

**ಸಂಪಾದಕ** : ಸರಿ. ಇಂಗ್ಲಿಷರು ಹೊರಟು ಹೋದರು ಎನ್ನೋಣ. ಆಮೇಲೆ ನೀವೇನು ಮಾಡುತ್ತೀರಿ?

**ಓದುಗ** : ಈಗಲೇ ಆ ಪ್ರಶ್ನೆಗೆ ಉತ್ತರ ಹೇಗೆ ಕೊಡಲಿ? ಅವರು ಯಾವ ರೀತಿಯಲ್ಲಿ ಹೊರಟು ಹೋಗುತ್ತಾರೋ ಅದನ್ನು ಅವಲಂಬಿಸಿದೆ ಆಮೇಲಿನ ಸ್ಥಿತಿ. ನೀವು ಅನ್ನುವ ಹಾಗೆ, ಅವರು ಹೊರಟು ಹೋದರೆ ಅವರ ಶಾಸನ ಪದ್ಧತಿಯನ್ನೇ ಹಾಗೆ ಇಟ್ಟುಕೊಂಡು ರಾಜ್ಯಭಾರ ನಡೆಸಿಯೇವು. ನಾವು ಕೇಳಿದ ಮಾತ್ರಕ್ಕೇ ಅವರು ಹೊರಟು ಹೋದರೆ ನಮಗೆ ಸರ್ವ ಸನ್ನದ್ಧವಾದ ಸೇವೆ ಇತ್ಯಾದಿ ಲಭಿಸುತ್ತವೆ. ಆದ್ದರಿಂದ ರಾಜ್ಯಭಾರ ಮಾಡಲು ಆತಂಕಗಳಿರುವುದಿಲ್ಲ.

**ಸಂಪಾದಕ** : ನಿಮಗೆ ಹಾಗನಿಸಬಹುದು, ನನಗೆ ಹಾಗನಿಸದು. ಈಗಲೇ ಈ ಚರ್ಚೆ ಬೇಡ. ನಿಮ್ಮ ಪ್ರಶ್ನೆಗೆ ಮೊದಲು ಉತ್ತರ ಹೇಳಬೇಕು. ನಿಮ್ಮನ್ನೇ ಕೆಲವು ಪ್ರಶ್ನೆ ಕೇಳುತ್ತೇನೆ. ಇಂಗ್ಲಿಷರನ್ನು ಏಕೆ ಓಡಿಸಬೇಕೆನ್ನುತ್ತೀರಿ, ಹೇಳಿ?

**ಓದುಗ** : ಅವರ ಆಡಳಿತದಿಂದ ನಮ್ಮ ದೇಶ ಕಂಗಾಲಾಗಿದೆ. ವರ್ಷ ವರ್ಷವೂ ನಮ್ಮ ಧನವನ್ನು ಹೊತ್ತುಕೊಂಡು ಹೋಗುತ್ತಿದ್ದಾರೆ. ದೊಡ್ಡ ದೊಡ್ಡ ನೌಕರಿಗಳನ್ನೆಲ್ಲ ಬಿಳಿಯರಿಗೇ ಕೊಡುತ್ತಾರೆ. ನಮ್ಮನ್ನು ಗುಲಾಮಗಿರಿಯಲ್ಲಿ ಮುಳುಗಿಸಿದ್ದಾರೆ. ನಮ್ಮನ್ನು ಅತಿ ಉದ್ದಂಡತನದಿಂದ ಕಾಣುತ್ತಾರೆ. ನಮ್ಮ ಮನೋಭಾವನೆಗಳನ್ನು ಅಸಡ್ಡೆ ಮಾಡುತ್ತಾರೆ.

**ಸಂಪಾದಕ** : ನಮ್ಮ ಧನವನ್ನು ಒಯ್ಯದಿದ್ದರೆ, ವಿನಮ್ರರಾದರೇ ನಮಗೆ ದೊಡ್ಡ ನೌಕರಿಗಳನ್ನು ಕೊಟ್ಟರೆ ಆಗಲೂ ಅವರು ಇದ್ದರೆ ಬಾಧಕವೇ?

**ಓದುಗ** : ಇದು ವ್ಯರ್ಥ ಪ್ರಶ್ನೆ. ಹುಲಿ ತನ್ನ ದುಷ್ಟತನವನ್ನು ಬಿಟ್ಟರೆ ಅದನ್ನು ಸಾಕಬಹುದೆ ಎಂದ ಹಾಗೆ. ಇಂಥ ಪ್ರಶ್ನೆಯಿಂದ ಬುದ್ಧಿ, ಕಾಲ ಹರಣವಲ್ಲದೆ ಬೇರೇನೂ ಇಲ್ಲ. ಹುಲಿ ತನ್ನ ಗುಣವನ್ನು ಬಿಟ್ಟಾಗಲೇ ಇಂಗ್ಲಿಷರು ತಮ್ಮ ಸ್ವಭಾವ ಬದಲಿಸುವುದು. ಇದು ಅಸಂಭವ. ಇದನ್ನು ಸಂಭವ ಎಂದು ತಿಳಿಯುವುದು ಮನುಷ್ಯ ಅನುಭವಕ್ಕೇ ವಿರುದ್ಧ.

**ಸಂಪಾದಕ** : ಕೆನಡಾ, ದಕ್ಷಿಣ ಆಫ್ರಿಕಾಗಳಿರುವಂಥ ಸ್ವರಾಜ್ಯ ನಮಗೆ ಸಿಕ್ಕರೆ?

**ಓದುಗ :** ಇದೂ ವ್ಯರ್ಥ ಪ್ರಶ್ನೆಯೇ. ಅವರಿಗಿರುವ ಹಾಗೆ ನಮಗೂ ಮದ್ದುಗುಂಡಿನ ಬಲವಿದ್ದರೆ ನಮಗೂ ಸಿಕ್ಕೀತು. ಆಗ ನಮ್ಮ ಬಾವುಟವನ್ನು ಹಾರಿಸಿಯೇವು, ಹಿಂದೂಸ್ಥಾನವೂ ಜಪಾನಿನ ಹಾಗೆ ಆದೀತು. ನಮಗೆ ನಮ್ಮದೇ ಸೇನೆ, ನಮ್ಮದೇ ನೌಕಾದಳ ಇದ್ದೀತು. ನಮ್ಮ ವೈಭವವಿದ್ದೀತು. ಆಗ ಇಡೀ ಲೋಕದಲ್ಲಿ ಹಿಂದೂಸ್ಥಾನದ ಧ್ವನಿ ಕೇಳಿಸೀತು.

**ಸಂಪಾದಕ :** ಚಿತ್ರವನ್ನು ಚೆನ್ನಾಗಿಯೇ ಚಿತ್ರಿಸಿದಿರಿ. ಇದರ ಆಧಾರ ಇಷ್ಟು: ನಮಗೆ ಇಂಗ್ಲಿಷ್ ರಾಜ್ಯ ಬೇಕು; ಇಂಗ್ಲಿಷರು ಬೇಡ, ಹುಲಿಯ ಗುಣ ಬೇಕು, ಹುಲಿ ಮಾತ್ರ ಬೇಡ. ಎಂದರೆ ಹಿಂದೂಸ್ಥಾನವನ್ನು ಇಂಗ್ಲಿಷಾಗಿ ಮಾಡಬೇಕು. ಆಗ ಇದು ಹಿಂದೂಸ್ಥಾನವಲ್ಲ, ಇಂಗ್ಲಿಷ್‌ಸ್ಥಾನವಾದೀತು. ಇಂಥ ಸ್ವರಾಜ್ಯ ನನಗೆ ಬೇಡ.

**ಓದುಗ :** ಸ್ವರಾಜ್ಯ ಹೇಗಿರಬೇಕೋ ನನಗನಿಸಿದ್ದನ್ನು ನಾನು ಹೇಳಿದೆ. ನಾವು ಪಡೆದಿರುವ ಶಿಕ್ಷಣ ಉಪಯೋಗಕರವಾಗಿದ್ದರೆ, ಸ್ಪೆನ್ಸರ್, ಮಿಲ್ ಮೊದಲಾದವರ ಗ್ರಂಥಗಳಿಗೆ ಮಹತ್ವವಿದೆ ಎಂದರೆ, ಇಂಗ್ಲಿಷ್ ಪಾರ್ಲಿಮೆಂಟ್ ಎಲ್ಲಾ ಪಾರ್ಲಿಮೆಂಟ್‌ಗಳ ತಾಯಿಯಾಗಿದ್ದರೆ, ನಾವು ಇಂಗ್ಲಿಷರನ್ನು ಅನುಕರಿಸಲೇ ಬೇಕು ಎನಿಸುತ್ತದೆ. ತಮ್ಮ ದೇಶದಲ್ಲಿ ಪರರಿಗೆ ಕಾಲೂರಲು ಅವರು ಹೇಗೆ ಆಸ್ಪದ ಕೊಡರೋ ಅವರಿಗಾಗಲೀ ಇತರರಿಗಾಗಲಿ ಕಾಲೂರಲು ನಾವೂ ನಮ್ಮ ದೇಶದಲ್ಲಿ ಅವಕಾಶ ಕೊಡಬಾರದು. ಅವರು ತಮ್ಮ ದೇಶದಲ್ಲಿ ಮಾಡಿದ ಹಾಗೆ ಬೇರೆ ಯಾವ ದೇಶದಲ್ಲಿಯೂ ಮಾಡಿದಂತಿಲ್ಲ, ಆದ್ದರಿಂದ ಅವರು ಮಾಡಿರುವ ಹಾಗೆ ನಮ್ಮ ದೇಶದಲ್ಲಿಯೂ ಮಾಡಬೇಕು. ಇರಲಿ, ಈಗ ನಿಮ್ಮ ವಿಚಾರವನ್ನು ಹೇಳಿ.

**ಸಂಪಾದಕ :** ಸ್ವಲ್ಪ ನಿಧಾನಿಸಿ. ಈ ಮಾತುಕತೆಯ ಪರಂಪರೆಯಲ್ಲಿ ನನ್ನ ವಿಚಾರ ತಾನೇ ವ್ಯಕ್ತಗೊಳ್ಳುತ್ತದೆ. ಸ್ವರಾಜ್ಯದ ರೂಪವನ್ನು ನೀವು ಬಹಳ ಸುಲಭವಾಗಿ ತಿಳಿದುಕೊಂಡಿರಿ. ನನಗೆ ಅಷ್ಟೇ ಕಷ್ಟವಾಗಿದೆ ಅದು. ಆದ್ದರಿಂದ ಸದ್ಯ ನೀವು ಯಾವುದನ್ನು ಸ್ವರಾಜ್ಯ ಎನ್ನುತ್ತೀರೋ ಅದು ಸ್ವರಾಜ್ಯವಲ್ಲ ಎಂಬುದನ್ನು ತೋರಿಸಲು ಯತ್ನಿಸುತ್ತೇನೆ.

■

## ಅಧ್ಯಾಯ – 5

# ಇಂಗ್ಲೆಂಡಿನ ಸ್ಥಿತಿ

**ಓದುಗ :** ನೀವು ಹೇಳುವುದನ್ನು ಕೇಳಿದರೆ ಇಂಗ್ಲೆಂಡಿನ ಆಡಳಿತ ಯೋಗ್ಯವಲ್ಲ. ನಮಗೆ ಅನುಕರಣೀಯವಲ್ಲ ಎಂದು ಅಭಿಪ್ರಾಯವಾಗುತ್ತದೆ.

**ಸಂಪಾದಕ:** ನಿಮ್ಮ ಅಭಿಪ್ರಾಯ ಸರಿ. ಇಂಗ್ಲೆಂಡಿನ ಸದ್ಯದ ಪರಿಸ್ಥಿತಿ ದಯನೀಯವಾಗಿದೆ. ದೇವರ ದಯೆಯಿಂದ ಹಿಂದೂಸ್ಥಾನಕ್ಕೆ ಅಂಥಾ ಸ್ಥಿತಿ ಎಂದೂ ಬಾರದಿರಲಿ. ಪಾರ್ಲಿಮೆಂಟಿನ ಜನನಿಯೆಂದು ನೀವು ಕರೆವುದು ಕೇವಲ ಬಂಜೆ, ವೇಶ್ಯೆ. ಇವೆರಡೂ ಶಬ್ದ ಬಹಳ ಕಠೋರ. ಆದರೆ ಎರಡೂ ಸರಿಯಾಗಿ ಹೊಂದುತ್ತವೆ. ಇದುವರೆಗೂ ಪಾರ್ಲಿಮೆಂಟ್ ತಾನಾಗಿ ಒಂದಾದರೂ ಒಳ್ಳೆಯ ಕೆಲಸವನ್ನು ಮಾಡಲಿಲ್ಲ. ಆದ್ದರಿಂದ ಅದನ್ನು ಬಂಜೆ ಎನ್ನುತ್ತೇನೆ. ಹೊರಗಿನಿಂದ ಒತ್ತಾಯ ಬಾರದೆ ಅದು ಏನೂ ಮಾಡುವಂತಿಲ್ಲ; ಅದರ ಸ್ವಭಾವವೇ ಹಾಗೆ. ಪದೇ ಪದೇ ಬದಲಾಗುವ ಮಂತ್ರಿಗಳು ಅದರ ನಾಯಕರು. ಅದರಿಂದ ವೇಶ್ಯೆ. ಇವೊತ್ತು ಅದರ ನಾಯಕ ಆಸ್ಕ್ವಿತ್, ನಾಳೆ ಬಾಲ್‌ಫರ್ ಆಗಬಹುದು.

**ಓದುಗ :** ನೀವು ವ್ಯಂಗ್ಯವಾಗಿ ಹೇಳಿದಿರಿ. ಬಂಜೆ ಎಂಬುದು ಸರಿಯಲ್ಲ. ಪಾರ್ಲಿಮೆಂಟ್ ಜನತೆ ಆರಿಸಿದುದು. ಆದ್ದರಿಂದ ಜನರ ಒತ್ತಾಯದಿಂದ ಅದು ಕೆಲಸ ಮಾಡಬೇಕಾದುದು ಅದರ ಗುಣ.

**ಸಂಪಾದಕ :** ನಿಮಗೆ ಭ್ರಾಂತಿ. ಪಾರ್ಲಿಮೆಂಟ್ ಬಂಜೆಯಲ್ಲದಿದ್ದರೆ ಜನರು ಉತ್ತಮ ಸದಸ್ಯರನ್ನೇ ಆರಿಸಿ ಕಳಿಸುತ್ತಿದ್ದರು. ಸದಸ್ಯನಿಗೆ ಸಂಬಳವಿಲ್ಲ. ಆದ್ದರಿಂದ ಅವರಲ್ಲಿ ಲೋಕ ಕಲ್ಯಾಣ ಭಾವನೆ ಇರಬೇಕಲ್ಲವೇ. ಅವರನ್ನು ಆರಿಸುವ

ಜನರು ವಿದ್ಯಾವಂತರು ಸಾಮಾನ್ಯವಾಗಿ ಆರಿಸುವುದರಲ್ಲಿ ಅವರು ತಪ್ಪು ಮಾಡಲಾರರು. ಅಂಥ ಪಾರ್ಲಿಮೆಂಟಿಗೆ ಬಿನ್ನಹದ ಅರಿಕೆಗಳ, ಒತ್ತಾಯದ ಅಗತ್ಯವಿರಬಾರದು. ಅದರ ಕೆಲಸ ಬಹಳ ಮೃದುವಾಗಿ ಸಾಗಿ ದಿನೇ ದಿನೇ ಅದರ ಪ್ರಭಾವ ಹೆಚ್ಚು ಕಾಣಬೇಕು. ಆದರೆ ಪಾರ್ಲಿಮೆಂಟ್ ಸದಸ್ಯರು ಸ್ವಾರ್ಥಿಗಳು ಕಪಟಿಗ ಎಂದು ಎಲ್ಲರೂ ಹೇಳುತ್ತಾರೆ. ಪ್ರತಿಯೊಬ್ಬನಿಗೂ ತನ್ನ ಕ್ಷುದ್ರ ಸ್ವಾರ್ಥದ್ದೇ ಚಿಂತೆ. ಪಾರ್ಲಿಮೆಂಟಿನ ಕೆಲಸಕ್ಕೆ ಭಯವೇ ಮೂಲ ಕಾರಣ. ಇವೊತ್ತು ಮಾಡಿದುದನ್ನು ನಾಳೆ ಅಳಿಸಬಹುದು. ಇಂಥ ಒಂದು ಕೆಲಸವನ್ನು ಪಾರ್ಲಿಮೆಂಟ್ ಕೊನೆಗಾಣಿಸಿತು ಎನ್ನುವ ಹಾಗಿಲ್ಲ, ಮಹತ್ತಾದ ಪ್ರಶ್ನೆಗಳ ಚರ್ಚೆ ನಡೆಯುವಾಗ ಸದಸ್ಯರು ತೂಕಡಿಸುತ್ತಿರುತ್ತಾರೆ. ಒಂದೊಂದು ಸಲ ಕೇಳುವವರಿಗೆ ಬೇಸರ ಬರುವಷ್ಟು ಬರೀ ಮಾತೇ ಆಡುತ್ತಾರೆ. ಪಾರ್ಲಿಮೆಂಟನ್ನು 'ಜಗತ್ತಿನ ಮಾತಿನ ಅಂಗಡಿ' ಎಂದು ವರ್ಣಿಸಿದ್ದಾನೆ ಕಾರ್ಲೈಲ್. ಸದಸ್ಯರು ಏನೂ ಯೋಚಿಸದೆ ಕಣ್ಣುಮುಚ್ಚಿ ತಮ್ಮ ಪಕ್ಷದ ಕಡೆ ವೋಟು ಮಾಡುತ್ತಾರೆ. ಅವರ ಪಕ್ಷದ ಶಿಸ್ತು ಅದು. ಒಂದು ವೇಳೆ ಒಬ್ಬ ಸದಸ್ಯ ಸ್ವತಂತ್ರಿಸಿ ವೋಟು ಕೊಟ್ಟನೋ, ಅವನು ದ್ರೋಹಿ ಎನಿಸುತ್ತಾನೆ. ಪಾರ್ಲಿಮೆಂಟಿಗಾಗಿ ಆಗುವ ಕಾಲವ್ಯಯ, ಧನವ್ಯಯವನ್ನು ಕೆಲವರೇ ಸಜ್ಜನರಿಗೆ ವಹಿಸಿದರೂ ಇಂಗ್ಲಿಷ್ ಜನಾಂಗ ಇಂದಿಗಿಂತ ಉತ್ತಮ ಸ್ಥಿತಿಯಲ್ಲಿರುತ್ತಿತ್ತು. ಇವೊತ್ತು ಅದು ಜನತೆಗೆ ಒಂದು ವಿನೋದ. ಬಹಳ ತುಟ್ಟಿಯಾದ ಆಟದ ಸಾಮಗ್ರಿ, ಈ ಅಭಿಪ್ರಾಯಗಳೆಲ್ಲ ನನ್ನೊಬ್ಬನದೇ ಎಂದು ತಿಳಿಯಬೇಡಿ. ಹಲವಾರು ವಿಚಾರವಂತ ಇಂಗ್ಲಿಷರೇ ಹೀಗೆ ಹೇಳಿದ್ದಾರೆ. ಧರ್ಮಿಷ್ಠ ಕ್ರಿಶ್ಚಿಯನ್ ಯಾರೂ ಈ ಪಾರ್ಲಿಮೆಂಟ್ ಸದಸ್ಯನಾಗಲಾರ ಎಂದು ಮೊನ್ನೆ ಒಬ್ಬ ಸದಸ್ಯನೇ ಹೇಳಿದ. ಪಾರ್ಲಿಮೆಂಟ್ ಇನ್ನೂ ಹಸುಗೂಸು ಎಂದ ಇನ್ನೊಬ್ಬ. 700 ವರ್ಷವಾದರೂ ಇನ್ನೂ ಹಸುಗೂಸಾದರೆ ಇದು ದೊಡ್ಡದಾಗುವುದು ಎಂದು?

**ಓದುಗ:** ಅಂತೂ ಯೋಚನೆ ಮಾಡುವ ಹಾಗೆ ಮಾಡಿದಿರಿ. ನೀವು ಹೇಳಿದುದನ್ನೆಲ್ಲಾ ನಾನು ಈಗಲೇ ಒಪ್ಪಲಾರೆ. ನೀವು ಹೇಳಿದುದೆಲ್ಲಾ ಹೊಸ ವಿಚಾರ. ಅದನ್ನು ನಾನು ಅರಗಿಸಿಕೊಳ್ಳಬೇಕು. 'ವೇಶ್ಯೆ' ಎಂದಿರಲ್ಲ ಅದನ್ನು ವಿವರಿಸುತ್ತೀರಾ?

**ಸಂಪಾದಕ:** ನನ್ನ ವಿಚಾರವನ್ನು ಒಂದೇ ಸಲಕ್ಕೆ ಒಪ್ಪದುದು ಸರಿಯೆ. ಈ ವಿಷಯ ಕುರಿತ ಸಾಹಿತ್ಯವನ್ನೋದಿದರೆ ನಿಮಗೆ ಅದರ ವಿಚಾರ ತಿಳಿಯುತ್ತದೆ. ಪಾರ್ಲಿಮೆಂಟಿಗೆ ವಾಸ್ತವವಾಗಿ ಯಾರೂ ಒಡೆಯರಿಲ್ಲ. ಯಾರೊಬ್ಬರೂ ಅದಕ್ಕೆ ಯಜಮಾನರಲ್ಲ. ಪ್ರಧಾನ ಮಂತ್ರಿ ಅದಕ್ಕೆ ಒಡೆಯನಲ್ಲ. ಆತನೂ ಅದನ್ನು ಒಂದೇ ಮಾರ್ಗದಲ್ಲಿ ಇಡಲಾರ. ವೇಶ್ಯೆಯಂತೆ ಅನೇಕ ಮಾರ್ಗ ಅದರದು. ಪ್ರಧಾನ ಮಂತ್ರಿಗೆ ಪಾರ್ಲಿಮೆಂಟಿನ ಯೋಚನೆ ಕಡಿಮೆ; ತನ್ನ ಪ್ರಭುತ್ವದ ಚಿಂತೆಯೇ ಹೆಚ್ಚು. ತನ್ನ ಪಕ್ಷದ ಗೆಲುವಿಗಾಗಿ ಆತನ ಸರ್ವಶಕ್ತಿಯೂ ಮೀಸಲು. ಪಾರ್ಲಿಮೆಂಟ್ ಒಳ್ಳೆಯ ಕೆಲಸಮಾಡಲಿ ಎಂಬ ಲಕ್ಷ್ಯವಿಲ್ಲ. ತನ್ನ ಪಕ್ಷಕ್ಕೆ ಅನುಕೂಲವಾಗಲಿ, ಪಕ್ಷ ಬಲವಾಗಲಿ ಎಂದೇ ಎಷ್ಟೋ ಕೆಲಸ ಮಾಡುತ್ತಾರೆ, ಪ್ರಧಾನ ಮಂತ್ರಿಗಳು. ಇದೆಲ್ಲವೂ ಆಲೋಚಿಸಬೇಕಾದ ಅಂಶಗಳೇ.

**ಓದುಗ:** ಇಂದಿನವರೆಗೆ ನಾವು ಯಾರನ್ನು ದೇಶಭಕ್ತರು ಪ್ರಾಮಾಣಿಕರು ಎಂದು ತಿಳಿದಿದ್ದೆವೋ ಅವರನ್ನೇ ನೀವು ಟೀಕಿಸುತ್ತಿದ್ದೀರಲ್ಲ?

**ಸಂಪಾದಕ:** ಹೌದು. ಪ್ರಧಾನ ಮಂತ್ರಿಗಳೊಡನೆ ನನಗೇನು ವಿರೋಧವಿಲ್ಲ. ಆದರೆ ನಾನು ನೋಡಿದುದರಲ್ಲಿ ಅವರು ನಿಜವಾಗಿ ದೇಶಭಕ್ತರೆನ್ನುವಂತಿಲ್ಲ. ಸಾಮಾನ್ಯವಾಗಿ ಲಂಚಕೋರತನ ಎನ್ನುತ್ತೇವಲ್ಲ. ಅದು ಅವರಲ್ಲಿಲ್ಲವಾದುದರಿಂದ ಅವರು ಪ್ರಾಮಾಣಿಕರು ಎನ್ನುವುದಾದರೆ ಸರಿಯೇ. ಆದರೆ ಇತರ ಸೂಕ್ಷ್ಮ ಪ್ರಭಾವಗಳಿಗೆ ಒಳಗಾಗುವುದಿಲ್ಲ. ತಮ್ಮ ಕೆಲಸ ಸಾಧಿಸಿಕೊಳ್ಳಲು ಅವರು ಇತರರಿಗೆ ಬಿರುದು – ಪದವಿಗಳನ್ನು ಕೊಟ್ಟು ವಶಮಾಡಿಕೊಳ್ಳುತ್ತಾರೆ. ಅವರಿಗೆ ಪ್ರಾಮಾಣಿಕತೆಯೂ ಇಲ್ಲ, ಶುದ್ಧಭಾವವೂ ಇಲ್ಲ; ನಿಸ್ಸಂಕೋಚವಾಗಿ ಹೇಳುತ್ತೇನೆ.

**ಓದುಗ :** ಪಾರ್ಲಿಮೆಂಟ್ ಕುರಿತು ಹೀಗೆ ಹೇಳಿದ ಮೇಲೆ ಇಂಗ್ಲಿಷ್ ಜನರ ವಿಷಯವಾಗಿ ಏನು ಹೇಳುತ್ತೀರೋ ಕೇಳೋಣ. ಅವರ ಸರಕಾರದ ಬಗ್ಗೆ ಏನು ನಿಮ್ಮ ಅಭಿಪ್ರಾಯ?

**ಸಂಪಾದಕ :** ಇಂಗ್ಲಿಷ್ ಮತದಾರರಿಗೆ ಪತ್ರಿಕೆಗಳೇ ವೇದವಾಕ್ಯ. ಪತ್ರಿಕೆಗಳಿಂದ ಅವರು ವಿಷಯವನ್ನು ತಿಳಿದುಕೊಳ್ಳುತ್ತಾರೆ. ಪತ್ರಿಕೆಗಳೂ ಬಹುಮಟ್ಟಿಗೆ ಅಪ್ರಾಮಾಣಿಕ. ಒಂದೇ ಸಂಗತಿಯನ್ನು ಬೇರೆ ಬೇರೆ ಪತ್ರಿಕೆಗಳು ಬೇರೆ ಬೇರೆ

ರೀತಿಯಲ್ಲಿ ತಮ್ಮ ಪಕ್ಷಕ್ಕೆ ಅನುಕೂಲವಾಗುವ ಹಾಗೆ ಬರೆಯುತ್ತಾರೆ. ಒಬ್ಬ ಇಂಗ್ಲಿಷ್ ನಾಯಕನನ್ನು ಒಂದು ಪತ್ರಿಕೆ ಸತ್ಯಸಂಧತೆಯ ಅವತಾರ ಎಂದು ಹೊಗಳುತ್ತದೆ: ಇನ್ನೊಂದು ಸುಳ್ಳಿನ ಪರ್ವತ ಎಂದು ತೆಗಳುತ್ತದೆ. ಇಂಥ ಪತ್ರಿಕೆಗಳಿರುವ ದೇಶದ ಜನರ ಗತಿ ಹೇಗಿದ್ದೀತು?

**ಓದುಗ :** ತಾವೇ ಹೇಳಿ.

**ಸಂಪಾದಕ :** ಈ ಜನ ಗಳಿಗೆ ಗಳಿಗೆಗೂ ತಮ್ಮ ಅಭಿಪ್ರಾಯ ಬದಲಿಸುತ್ತಾರೆ. ಏಳೇಳು ವರ್ಷಕ್ಕೆ ಒಂದು ಸಲ ಬದಲಿಸುತ್ತಾರೆಂದು ಒಂದು ಪ್ರತೀತಿಯಿದೆ. ಗಡಿಯಾರದ ಲಂಬಕದಂತೆ ಅವರ ವಿಚಾರ ಅತ್ತ-ಇತ್ತ ಅಲ್ಲಾಡುತ್ತಲೇ ಇರುತ್ತದೆ. ಸ್ಥಿರವಲ್ಲ. ಸಮರ್ಥ ಭಾಷಣಕಾರ ಒಬ್ಬನು ದೊಡ್ಡ ದೊಡ್ಡ ಮಾತಾಡಿದರೆ, ಯಾರಾದರೂ ಸತ್ಕಾರ – ಸಮಾರಾಧನೆ ಮಾಡಿದರೆ, ಅವನ ಕಡೆ ವಾಲುತ್ತಾರೆ ಜನ. ಜನ ಇದ್ದ ಹಾಗೆ ಪಾರ್ಲಿಮೆಂಟು. ಆದರೆ ಅವರಲ್ಲಿ ಒಂದು ಗುಣ ಬಲವಾಗಿ ಬೇರೂರಿದೆ. ತಮ್ಮ ದೇಶವನ್ನು ಮಾತ್ರ ಎಂದಿಗೂ ಬಿಟ್ಟುಕೊಡರು. ಯಾರಾದರೂ ಅದರ ಕಡೆ ಕಣ್ಣು ಹೊರಳಿಸಿದರೆ ಅವರ ಕಣ್ಣನ್ನೇ ಕಿತ್ತುಬಿಟ್ಟಾರು. ಉಳಿದ ಯಾವ ಗುಣವೂ ಅನುಕರಿಸಬೇಕಾದುದು ಈ ರಾಷ್ಟ್ರಕ್ಕೆ ಇಲ್ಲ. ಹಿಂದೂಸ್ಥಾನ ಇಂಗ್ಲೆಂಡನ್ನು ಅನುಕರಿಸಿದರೆ ಸರ್ವ ನಾಶವಾಗುತ್ತದೆ ಎಂದು ನನ್ನ ದೃಢ ಅಭಿಪ್ರಾಯ.

**ಓದುಗ :** ಇಂಗ್ಲಿಷರ ಈ ಗತಿಗೆ ಏನು ಕಾರಣವಿರಬಹುದು?

**ಸಂಪಾದಕ:** ಇದರಲ್ಲಿ ಇಂಗ್ಲಿಷ್ ಜನರದು ವಿಶೇಷವಾದ ತಪ್ಪೇನೂ ಇಲ್ಲ. ಆಧುನಿಕ ನಾಗರಿಕತೆಯ ಪರಿಣಾಮ ಇದು. ಅದು ಹೆಸರಿಗೆ ನಾಗರಿಕತೆ. ಅದರ ವೆಸೆಯಿಂದ ಯೂರೋಪಿನ ರಾಷ್ಟ್ರಗಳೆಲ್ಲ ದಿನೇ ದಿನೇ ಹಾಳಾಗಿ ಹೋಗುತ್ತಿವೆ.



## ಅಧ್ಯಾಯ – 6

# ನಾಗರಿಕತೆ

**ಓದುಗ :** ನಾಗರಿಕತೆಯೆಂದರೇನೋ ನೀವು ಹೇಳಬೇಕಾಯಿತಲ್ಲ ಈಗ!

**ಸಂಪಾದಕ :** ನಾನು ಹೇಳುವುದೇ ಅಲ್ಲ; ಅನೇಕ ಇಂಗ್ಲಿಷ್ ಲೇಖಕರು ಇದನ್ನು ನಾಗರಿಕತೆಯೆಂದು ಕರೆಯಲು ಒಪ್ಪರು. ಇದನ್ನು ಕುರಿತು ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಅಷ್ಟೇ ಅಲ್ಲ, ಈ ನಾಗರಿಕತೆಯ ಮಾಯಾಜಾಲದಿಂದ ರಾಷ್ಟ್ರವನ್ನು ಬಿಡಿಸಲು ಹಲವಾರು ಸಂಸ್ಥೆಗಳು ಸ್ಥಾಪಿತವಾಗುತ್ತಿವೆ. ಪ್ರಸಿದ್ಧ ಇಂಗ್ಲಿಷ್ ಗ್ರಂಥಕರ್ತನೊಬ್ಬ 'ನಾಗರಿಕತೆ; ಅದರ ಕಾರಣ, ಅದರ ಪರಿಹಾರ' ಎಂಬ ಪುಸ್ತಕವನ್ನೇ ಬರೆದಿದ್ದಾನೆ. ಅದರಲ್ಲಿ ಇದು ಒಂದು ರೋಗ ಎಂದು ತೋರಿಸಿದ್ದಾನೆ.

**ಓದುಗ :** ನಮಗೇಕೆ ಸಾಧಾರಣವಾಗಿ ಇದು ತಿಳಿಯುವುದಿಲ್ಲ?

**ಸಂಪಾದಕ :** ಕಾರಣ ಸ್ಪಷ್ಟವಾಗಿಯೇ ಇದೆ. ತಮಗೇ ವಿರುದ್ಧವಾಗಿ ಯೋಚಿಸುವವರು ವಿರಳ. ಆಧುನಿಕ ನಾಗರಿಕತೆಯ ಮೋಹಜಾಲದಲ್ಲಿ ಸಿಕ್ಕಿರುವವರು ಅದರ ವಿರುದ್ಧವಾಗಿ ಬರೆದಾರೆಯೇ? ಅವರು ಅದರ ಸಮರ್ಥನೆಗೆ ಬೇಕಾದ ವಿಷಯ ತರ್ಕಗಳನ್ನೇ ಹುಡುಕಲು, ಅದರಲ್ಲಿ ತಮಗಿರುವ ನಂಬಿಕೆಯಿಂದ ತಮಗೇ ಗೊತ್ತಿಲ್ಲದೆಯೆ, ಪ್ರಯತ್ನಿಸಿಯಾರು. ಕನಸು ಬಿದ್ದವನಿಗೆ ಕನಸು ಸತ್ಯವೆಂದೇ ಕಾಣುತ್ತದೆ. ನಿದ್ದೆಯಿಂದ ಎಚ್ಚರವಾದಾಗ ಸತ್ಯ ತಿಳಿಯುತ್ತದೆ. ಈ ನಾಗರಿಕತೆಯ ಶಾಪ ತಗಲಿದವನು ಕನಸು ಬಿದ್ದ ಮನುಷ್ಯನ ಹಾಗೆ. ಸಾಮಾನ್ಯವಾಗಿ ನಾವು ಓದುವುದೆಲ್ಲ ಈ ನಾಗರಿಕತೆಯ ಸಮರ್ಥಕರ ಗ್ರಂಥಗಳೇ. ಅದರಲ್ಲಿ ಅನೇಕರು ಉತ್ತಮ ವಿದ್ವಾಂಸರೂ ಸತ್‌ಪುರುಷರೂ ಇದಾರೆ. ಮಾಟದ ಹಾಗೆ ಅವರ

ಗ್ರಂಥಗಳು ನಮ್ಮನ್ನು ಮುಗ್ಧಗೊಳಿಸುತ್ತವೆ. ಹೀಗಾಗಿ. ಒಬ್ಬರೊಬ್ಬರೇ ನಾವು ಆ ಸುಳಿಯಲ್ಲಿ ಸಿಕ್ಕಿಕೊಳ್ಳುತ್ತೇವೆ.

**ಓದುಗ** : ಇದೇನೋ ಸರಿಯಾಗಿ ಕಾಣುತ್ತಿದೆ. ಈ ನಾಗರಿಕತೆ ಕುರಿತು ನೀವು ಏನು ಓದಿದೀರೋ ಯೋಚಿಸಿದೀರೋ ಸ್ವಲ್ಪ ಹೇಳುತ್ತೀರಾ?

**ಸಂಪಾದಕ** : ಯಾವ ಸ್ಥಿತಿಗೆ 'ನಾಗರಿಕತೆ' ಎನ್ನುತ್ತಾರೋ ಮೊದಲು ಅದನ್ನು ಪರಿಶೀಲಿಸೋಣ. ಈ ನಾಗರಿಕತೆಯಲ್ಲಿ ಬದುಕುವ ಜನರಿಗೆ ಶರೀರ ಸುಖವೇ ಬಾಳಿನ ಗುರಿ; ಇದೇ ಅದರ ಲಕ್ಷಣ. ಶರೀರ ಸುಖವೆ ಪುರುಷಾರ್ಥ. ಕೆಲವು ಉದಾಹರಣೆಗಳನ್ನು ನೋಡೋಣ. ನೂರು ವರ್ಷಕ್ಕೆ ಹಿಂದೆ ಯೂರೋಪಿನಲ್ಲಿ ಮನೆಗಳು ಚೆನ್ನಾಗಿರಲಿಲ್ಲ. ಈಗ ಬಹಳ ಉತ್ತಮವಾಗಿವೆ. ಇದು ನಾಗರಿಕತೆಯ ಲಕ್ಷಣವಂತೆ, ಇದು ಶರೀರ ಸುಖದ ಸಾಧನ. ಪೂರ್ವದಲ್ಲಿ ಅವರು ತೊಗಲನ್ನು ಹೊದೆಯುತ್ತಿದ್ದರು. ಭರ್ಜಿ ಭಲ್ಲೆಗಳನ್ನು ಉಪಯೋಗಿಸುತ್ತಿದ್ದರು. ಈಗ ಉದ್ದನೆ ಷರಾಯಿ ತೊಡುತ್ತಾರೆ. ಮೈಯನ್ನು ಸಿಂಗರಿಸಲು ಹಲವು ಬಗೆಯ ಉಡುಪು ಉಡುತ್ತಾರೆ. ಭಲ್ಲೆ–ಭರ್ಜಿಗಳ ಬದಲು ಐದಾರು ಗೋಲಿಗಳ ರಿವಾಲ್ವರನ್ನು ಬಳಸುತ್ತಾರೆ. ಇಷ್ಟು ದಿನ ವಿಶೇಷವಾಗಿ ಬಟ್ಟೆಯನ್ನು ಬೂಟುಗಳನ್ನು ಉಪಯೋಗಿಸದ ದೇಶದ ಜನ ಇಂಗ್ಲಿಷರಂತೆ ಬಟ್ಟೆ ತೊಡಲು ಪ್ರಾರಂಭಿಸಿದರೆ, ಹೊಸದಾಗಿ ಅವರು ನಾಗರಿಕರಾದರೆಂದು ತಿಳಿಯುತ್ತಾರೆ. ಅದಕ್ಕೆ ಮೊದಲು ಅವರು ಅನಾಗರಿಕರು! ಹಿಂದೆ ಯೂರೋಪಿನಲ್ಲಿ ಜನರು ಕೈಯಿಂದ ಕೆಲಸಮಾಡುತ್ತಿದ್ದರು. ನೇಗಿಲು ಹಿಡಿದು ಉಳುತ್ತಿದ್ದರು. ಈಗ ಯಂತ್ರಗಳ ಸಹಾಯದಿಂದ ಒಬ್ಬನೇ ಸಾವಿರಾರು ಎಕರೆ ಉತ್ತುಬಿತ್ತಿ ಹೇರಳವಾಗಿ ಹಣ ಗಳಿಸಬಹುದು. ಇದು ನಾಗರಿಕತೆಯ ಲಕ್ಷಣವಂತೆ. ಮೊದಲು ಎಲ್ಲೋ ಕೆಲವರು ಉದ್‌ಗ್ರಂಥಗಳನ್ನು ಬರೆಯುತ್ತಿದ್ದರು. ಈಗೇನು ಯಾರು ಬೇಕಾದರೂ ಬರೆದು ಜನರ ಮನಸ್ಸನ್ನು ಕೆಡಿಸಬಹುದು. ಮೊದಲೆಲ್ಲ ಜನರು ಎತ್ತಿನ ಗಾಡಿಗಳಲ್ಲಿ 2 ಗಾವುದ ಪ್ರಯಾಣ ಮಾಡುತ್ತಿದ್ದರು. ಈಗ ರೈಲಿನಲ್ಲಿ ದಿನಕ್ಕೆ ನಾಲ್ಕೈದು ನೂರು ಮೈಲಿ ಹಾರಿಬಿಡುತ್ತಾರೆ. ನಾಗರಿಕತೆಯ ಔನ್ನತ್ಯದ ಕುರುಹಂತೆ ಇದು! ಇನ್ನೂ ಪ್ರಗತಿಯಾದರೆ ಜನರು ವಿಮಾನಗಳಲ್ಲಿ ಪ್ರಯಾಣ ಮಾಡಿ ನಾಲ್ಕು ಗಳಿಗೆಯಲ್ಲಿ ಯಾವ ದೇಶಕ್ಕಾದರೂ ಹೋಗಬಲ್ಲರಂತೆ. ಬರುಬರುತ್ತಾ ಜನರು ಕೈಕಾಲು

ಬಳಸುವ ಅಗತ್ಯವೇ ಇಲ್ಲ. ಒಂದು ಗುಂಡಿ ಒತ್ತಿದರೆ ಅವರ ಉಡುಪೆಲ್ಲ ಸಿದ್ಧವಾಗಿ ಬಂದು ನಿಲ್ಲುತ್ತದೆ. ಇನ್ನೊಂದು ಗುಂಡಿ ಒತ್ತಿದರೆ ಪತ್ರಿಕೆ ಬರುತ್ತದೆ. ಮತ್ತೊಂದು ಗುಂಡಿಯೊತ್ತಿದರೆ ಮೋಟಾರು ಸಿದ್ಧ. ಸನ್ನೆ ಮಾಡಿದರಾಯಿತು. ಐವತ್ತಾರು ಬಗೆಯ ಷಡ್ರಸಾನ್ನ ಬಡಿಸಿ ಸಿದ್ಧವಾಗಿ ಕೈಗೆ ಬರುತ್ತದೆ. ಎಲ್ಲವೂ ಯಂತ್ರಗಳಿಂದಲೇ. ಮೊದಲು ಒಬ್ಬರೊಡನೆ ಒಬ್ಬರು ಕದನವಾಡಲು ಮಲ್ಲಯುದ್ಧ ಮಾಡುತ್ತಿದ್ದರು. ಈಗ ಒಬ್ಬ ಮನುಷ್ಯ ಗುಡ್ಡದ ಮರೆಯಲ್ಲಿ ಮೆಷಿನ್ ಗನ್ನಿನ ಹಿಂದೆ ನಿಂತು ಸಾವಿರಾರು ಜನರನ್ನು ಕೊಲ್ಲಬಹುದು. ಇದು ನಾಗರಿಕತೆ! ಮೊದಲು ಜನರು ಬಯಲಿನಲ್ಲಿ ತಮ್ಮ ಇಚ್ಛಾನುಸಾರ ಕೆಲಸ ಮಾಡುತ್ತಿದ್ದರು. ಈಗ ಸಾವಿರಾರು ಜನ ಒಟ್ಟಾಗಿ ಸೇರಿ ಹೊಟ್ಟೆಪಾಡಿಗಾಗಿ ಕಾರ್ಖಾನೆಗಳಲ್ಲಿ, ಗಣಿಗಳಲ್ಲಿ ಕೆಲಸ ಮಾಡುತ್ತಾರೆ. ಅವರ ಗತಿ ದನಗಳಿಗಿಂತ ಅಧಮ. ತಮ್ಮ ಜೀವನದ ಆಸೆಬಿಟ್ಟು ಅತ್ಯಂತ ಅಪಾಯಕರ ಕೆಲಸಗಳನ್ನು ಧಣಿಗಳಾದ ಕೋಟೀಶ್ವರರಿಗಾಗಿ ಅವರು ಮಾಡಬೇಕಾಗುತ್ತದೆ. ಹಿಂದಿನ ಕಾಲದಲ್ಲಿ ಜನರನ್ನು ಹೊಡೆದು ಬಡಿದು ಬಲಾತ್ಕಾರವಾಗಿ ಗುಲಾಮರನ್ನಾಗಿ ಮಾಡುತ್ತಿದ್ದರು. ಈಗ ಹಣದಾಸೆ ತೋರಿಸಿ ಹಣದಿಂದ ದೊರೆವ ಸುಖ-ಸಂತೋಷಗಳ ಆಸೆ ತೋರಿಸಿ ಜನರನ್ನು ಗುಲಾಮರಾಗಿ ಮಾಡುತ್ತಿದ್ದಾರೆ. ಹಿಂದೆ ಎಂದೂ ಕೇಳದಿದ್ದ; ಕನಸಿನಲ್ಲೂ ಕಾಣದಿದ್ದ ರೋಗಗಳೆಲ್ಲ ಈಗ ಬಂದಿವೆ. ಅವಕ್ಕೆ ಚಿಕಿತ್ಸೆ ಮಾಡಲು ಡಾಕ್ಟರರ ಸೈನ್ಯವೇ ಒಂದು ಸಿದ್ಧವಾಗಿದೆ. ಆಸ್ಪತ್ರೆಗಳು ಹೆಚ್ಚಾಗಿವೆ. ಇದು ನಾಗರಿಕತೆಗೆ ಗುರುತು. ಮೊದಲು ಏನಾದರೂ ಸುದ್ದಿ ಕಳಿಸಲು ಓಲೆಕಾರರನ್ನು ಅದಕ್ಕಾಗಿ ಕಳಿಸಬೇಕಾಗುತ್ತಿತ್ತು. ಅವಕ್ಕೆ ವಿಶೇಷ ವೆಚ್ಚ. ಈಗ ಪತ್ರ ಬರೆಯುವುದು ಬಹಳ ಸುಲಭ. ಮೂರು ಕಾಸಿಗೆ ಒಂದು ಕಾರ್ಡು ಕೊಂಡು ಯಾರು ಯಾರನ್ನು ಬೇಕಾದರೂ ಬೈಯಬಹುದು. ಧನ್ಯವಾದಗಳನ್ನೂ ತಿಳಿಸಬಹುದು. ಮೊದಲು ದಿನಕ್ಕೆರಡು ಅಥವಾ ಮೂರು ಸಲ ಮನೆಯಲ್ಲಿಯೆ ಮಾಡಿದ ರೊಟ್ಟಿ ಹಿಟ್ಟು, ಕಾಯಿಪಲ್ಯ ತಿಂದು ಇರುತ್ತಿದ್ದರು. ಈಗ ಎರಡೆರಡು ಗಂಟೆಗೆ ಒಂದು ಸಲ ಏನಾದರೂ ತಿನ್ನುತ್ತಲೇ ಇರಬೇಕು. ಬೇರೆ ಯಾವ ಕೆಲಸಕ್ಕೂ ಬಿಡುವಾಗಬಾರದು. ಇನ್ನೂ ಎಷ್ಟು ಹೇಳಲಿ ಇದರ ವಿಷಯ? ಇವೆಲ್ಲವನ್ನೂ ಕೆಲವರು ಪ್ರಾಮಾಣಿಕ ಗ್ರಂಥಗಳನ್ನು ಓದಿ ತಿಳಿದುಕೊಳ್ಳಬಹುದು ಇವೇ ನಾಗರಿಕತೆಯ ಹೆಗ್ಗುರುತುಗಳು. ಇವಕ್ಕೆ ವಿರುದ್ಧವಾಗಿ ಯಾರಾದರೂ ಮಾತಾಡಿದರೆ ಅವನು ಅಜ್ಞಾನಿ ಎನ್ನುತ್ತಾರೆ.

ಈ ನಾಗರಿಕತೆಯಲ್ಲಿ ನೀತಿಯೂ ಇಲ್ಲ, ಧರ್ಮವೂ ಇಲ್ಲ. ಇಷ್ಟೇ ಅಲ್ಲ, ಧರ್ಮವನ್ನು ಕಲಿಸುವುದು ನಮ್ಮ ಕೆಲಸವಲ್ಲ ಎಂದು ಬಹಳ ಗಂಭೀರವಾಗಿ ಹೇಳುತ್ತಾರೆ. ಈ ನಾಗರಿಕತೆಯ ಭಕ್ತರು ಅನೇಕರು ಧರ್ಮವೆಂಬುದು ಬರೀ ಮೂಢತನ ಎನ್ನುತ್ತಾರೆ. ಇನ್ನು ಕೆಲವರು ಧರ್ಮದ ಸೋಗು ಹಾಕಿ ದೊಡ್ಡದಾಗಿ ನೀತಿಯನ್ನು ಉಪದೇಶಿಸುತ್ತಾರೆ. ಆದರೆ, ಇಪ್ಪತ್ತು ವರ್ಷಗಳ ಅನುಭವದಿಂದ ನನಗೆ ಮಂದಟ್ಟಾಗಿದೆ; ಇವರು ನೀತಿಯ ಸೋಗಿನಲ್ಲಿ ಕಲಿಸುವುದೆಲ್ಲ ಅನೀತಿಯೇ. ನಾನು ಮೇಲೆ ಹೇಳಿದುದರಲ್ಲಿ ನೀತಿಗೆ ಸಂಬಂಧಿಸಿದುದು ಎಳ್ಳಷ್ಟೂ ಇಲ್ಲವೆಂಬುದು ಒಂದು ಎಳೆ ಮಗುವಿಗೂ ಅರ್ಥವಾಗುವಂತಿದೆ. ಈ ನಾಗರಿಕತೆಯ 'ಒಲುಮೆ'ಯೆಲ್ಲಾ ಶರೀರ ಸುಖವನ್ನು ಹೆಚ್ಚಿಸುವುದರೊಳಗೇ. ಅದನ್ನು ಕೂಡ ಇದು ಸರಿಯಾಗಿ ಸಾಧಿಸಿಲ್ಲ.

ಈ ನಾಗರಿಕತೆ ಶುದ್ಧ ಅಧರ್ಮ. ಯೂರೋಪಿನ ಜನ ಇದರ ಮಾಯಾಜಾಲದಲ್ಲಿ ಸಿಕ್ಕಿ ಹುಚ್ಚರಾಗಿ ಹೋಗಿದಾರೆ. ಅವರಿಗೆ ನಿಜವಾಗಿ ಗಟ್ಟಿಯಾದ ಮೈಯೂ ಇಲ್ಲ, ಸಾಹಸವೂ ಇಲ್ಲ. ಮದ್ಯದ ಅಮಲಿನ ಬಲದಿಂದ ಕೆಲಸ ಕಾರ್ಯಗಳನ್ನು ನಡೆಸುತ್ತಾರೆ. ಏಕಾಂತದಲ್ಲಿ ಅವರಿಗೆ ಸವಿಯೇ ಇಲ್ಲ. ಒಂಟಿಯಾಗಿ ಇರಲಾರರು. ಗೃಹಲಕ್ಷ್ಮಿಯರಾಗಿ, ಮನೆಯ ಅರಸಿಯರಾಗಿ ಇರಬೇಕಾದ ಹೆಂಗಸರು ಬೀದಿ ಬೀದಿ ಅಲೆಯುತ್ತಿರುತ್ತಾರೆ ಅಥವಾ ಕಾರಖಾನೆಗಳಲ್ಲಿ ಕೂಲಿಮಾಡಲು ಹೋಗುತ್ತಾರೆ. ಬರೀ ನಾಲ್ಕು ದುಡ್ಡಿಗಾಗಿ. ಹೊಟ್ಟೆಪಾಡಿಗಾಗಿ. ಇಂಗ್ಲೆಂಡೊಂದರಲ್ಲೇ ಐವತ್ತು ಲಕ್ಷ ಹೆಂಗಸರು ಕಾರಖಾನೆಗಳಲ್ಲಿ, ಇತರ ಗಿರಣಿಗಳಲ್ಲಿ ಅತಿ ಕಷ್ಟದ ಕೆಲಸ ಮಾಡುತ್ತ ತಮ್ಮ ದುರ್ದಿನಗಳನ್ನು ಕಳೆಯುತ್ತಿದ್ದಾರೆ. ಹೆಂಗಸರಿಗೂ ಮತಾಧಿಕಾರ ಬೇಕು ಎಂಬ ಚಳವಳಿ ಬೆಳೆಯಲು ಇದು ಒಂದು ಕಾರಣ.

ನಾವು ತಾಳ್ಮೆಯಿಂದ ಇದ್ದರೆ ಈ ನಾಗರಿಕತೆ ತನ್ನ ಬೆಂಕಿಗೆ ತಾನೇ ಸುಟ್ಟು ಬೂದಿಯಾಗುತ್ತದೆ. ಮಹಮ್ಮದ್ ಪೈಗಂಬರ್ ಇದನ್ನು ಸೈತಾನೀ ನಾಗರಿಕತೆ ಎಂದ. ಹಿಂದೂ ಧರ್ಮ ಇದನ್ನು ಕಲಿಯುಗ ಎನ್ನುತ್ತದೆ. ಈ ನಾಗರಿಕತೆಯ ವಾಸ್ತವಿಕ ಚಿತ್ರವನ್ನು ಪೂರ್ಣವಾಗಿ ನಾನು ಚಿತ್ರಿಸಲಾರೆ. ಇಂಗ್ಲಿಷ್ ಜನಾಂಗವನ್ನು ಗೆದ್ದಲು ಹುಳದಂತೆ ತಿಂದುಹಾಕುತ್ತಿದೆ ಇದು. ಇದು ವಿನಾಶಕಾರಿ, ಇದನ್ನು

ಬಹಿಷ್ಕರಿಸಬೇಕು. ಪಾರ್ಲಿಮೆಂಟುಗಳು ನಿಜವಾಗಿ ಜನರ ದಾಸ್ಯದ ಗುರುತು. ಇದನ್ನೆಲ್ಲ ಚೆನ್ನಾಗಿ ವಿಚಾರ ಮಾಡಿ ನೋಡಿದರೆ ನಿಮಗೂ ಹೀಗೆಯೇ ಅನಿಸೀತು; ಇಂಗ್ಲಿಷರನ್ನು ದೂರುವ್ರುದನ್ನು ಬಿಟ್ಟೇರಿ. ಪಾಪ, ಅವರನ್ನು ನೋಡಿದರೆ ಕನಿಕರ ಬರುತ್ತದೆ. ಅವರು ಒಳ್ಳೆಯ ಜಾಣ ಜನರು. ಆದ್ದರಿಂದಲೇ ಈ ಮಾಯಾಜಾಲ ದಿಂದ ಮುಕ್ತರಾದಾರು ಎಂಬ ವಿಶ್ವಾಸ ನನಗಿದೆ. ಅವರು ಒಳ್ಳೆಯ ಸಾಹಸಿಗಳು, ಧೀರರು, ದುಡಿತಗಾರರು. ಅವರ ವಿಚಾರ ಸರಣಿ ಅನೀತಿಯದಲ್ಲ ಅವರ ಅಂತಃಕರಣವೂ ಅಶುದ್ಧವಲ್ಲ. ಆದುದರಿಂದ ಅವರ ಬಗ್ಗೆ ನನಗೆ ಗೌರವ. ನಾಗರಿಕತೆ ಗುಣವಾಗಲಾರದ ರೋಗವಲ್ಲ. ಆದರೆ ಸದ್ಯ ಇಂಗ್ಲಿಷರಿಗೆ ಆ ರೋಗ ಬಡಿದುಕೊಂಡಿದೆ ಎಂಬುದನ್ನು ಮರೆಯಬಾರದು.



## ಅಧ್ಯಾಯ – 7

# ಹಿಂದೂಸ್ಥಾನ ಪರಾಧೀನ ಏಕಾಯಿತು?

**ಓದುಗ :** ನಾಗರಿಕತೆ ಕುರಿತು ಬೇಕಾದಷ್ಟು ಹೇಳಿದಿರಿ. ಅದನ್ನು ಕೇಳಿ ನಾನು ವಿಚಾರ ಮಾಡಬೇಕಾಗಿದೆ. ಯೂರೋಪಿನ ಜನಾಂಗಗಳಿಂದ ಏನ ಕಲಿಯಬೇಕೋ ಏನು ಬಿಡಬೇಕೋ ನನಗೆ ತಿಳಿಯದಾಗಿದೆ. ಒಂದು ಜಿಜ್ಞಾಸೆ ಯೇನೋ ನನ್ನ ಮನಸ್ಸಿನಲ್ಲಿ ಒಡನೆಯೆ ಹುಟ್ಟಿದೆ. ಈ ನಾಗರಿಕತೆ ಒಂದು ರೋಗ, ಅನಾಗರಿಕತೆ ಎಂದರೆ ಆ ರೋಗ ಹಿಡಿದ ಇಂಗ್ಲೆಂಡು ಹೇಗೆ ಹಿಂದುಸ್ಥಾನ ವನ್ನು ತನ್ನ ಕೈಗೆ ತೆಗೆದುಕೊಂಡಿತು? ತನ್ನ ಅಧೀನದಲ್ಲಿಯೆ ಇಟ್ಟು ಕೊಂಡಿದೆಯಲ್ಲ. ಹೇಗೆ?

**ಸಂಪಾದಕ :** ನಿಮ್ಮ ಪ್ರಶ್ನೆ ಅಂಥ ಕಷ್ಟಕರವಾದುದಲ್ಲ. ಇದನ್ನು ಮುಗಿಸಿ ಸ್ವಲ್ಪ ಹೊತ್ತಿನಲ್ಲಿ ಸ್ವರಾಜ್ಯದ ನಿಜ ಸ್ವರೂಪದ ಮಾತನ್ನು ಹೇಳುತ್ತೇನೆ. ಇನ್ನೂ ನಿಮ್ಮ ಆ ಪ್ರಶ್ನೆಗೆ ನಾನು ಉತ್ತರ ಹೇಳಿಲ್ಲ. ಮೊದಲು ಈ ಪ್ರಶ್ನೆಯನ್ನು ಮುಗಿಸೋಣ. ಇಂಗ್ಲಿಷರು ಹಿಂದೂಸ್ಥಾನವನ್ನು ತೆಗೆದುಕೊಳ್ಳಲಿಲ್ಲ. ನಾವೇ ಅವರಿಗೆ ಒಪ್ಪಿಸಿದೆವು. ತಮ್ಮ ಸ್ವಶಕ್ತಿಯಿಂದ ಅವರು ಹಿಂದೂಸ್ಥಾನದಲ್ಲಿ ನಿಂತಿಲ್ಲ. ನಾವು ಅವರನ್ನು ಇರಗೊಟ್ಟಿದೇವೆ. ಇದು ಹೇಗೆ, ಕೇಳಿ. ಅವರು ಮೊದಲು ನಮ್ಮ ದೇಶಕ್ಕೆ ಬಂದದ್ದು ವ್ಯಾಪಾರಕ್ಕಾಗಿ. ಕುಂಪಣಿ ಬಹಾದೂರರನ್ನು ನೆನೆದುಕೊಳ್ಳಿ. ಪಾಪ, ಅವರಿಗೆ ಆ ಸಮಯದಲ್ಲಿ ಇಲ್ಲಿ ರಾಜ್ಯವನ್ನು ಸ್ಥಾಪಿಸುವ ಯೋಚನೆಯೆ ಇರಲಿಲ್ಲ. ಕಂಪನಿಯ ಅಧಿಕಾರಿಗಳಿಗೆ ಸಹಾಯ ಮಾಡಿದವರು ಯಾರು? ಅವರ ಬೆಳ್ಳಿ ಬಂಗಾರದ ಮೋಹಕ್ಕೆ ಬಲಿಯಾದವರು ಯಾರು? ಅವರ ಪದಾರ್ಥಗಳನ್ನು ಕೊಂಡವರು ಯಾರು? ನಾವೇ ಇದನ್ನೆಲ್ಲಾ ಮಾಡಿದವರು: ಇತಿಹಾಸ ಸಾಕ್ಷಿ ಹೇಳುತ್ತಿದೆ. ಒಂದೇ ಗಳಿಗೆಯಲ್ಲಿ ಲಕ್ಷಾಧಿಕಾರಿಗಳಾಗುವ

ಆಸೆಯಿಂದ ನಾವೇ ಕಂಪನಿಯ ಅಧಿಕಾರಿಗಳನ್ನು ಕೈಬೀಸಿ ಸ್ವಾಗತಿಸಿದೆವು. ನಾವೇ ಅವರಿಗೆ ನೆರವಾದೆವು. ನನಗೆ ಭಂಗಿ ಸೇದುವ ಚಟವಿದ್ದು, ಅದನ್ನು ನನಗೊಬ್ಬ ಮಾರಿದರೆ – ತಪ್ಪು ಅವನದೋ ನನ್ನದೋ? ಮಾರಿದವನನ್ನು ಬೈದರೆ ನನ್ನ ಚಟ ಬಿಟ್ಟೀತೆ? ಭಂಗಿ ಮಾರುವ ವರ್ತಕನೊಬ್ಬನನ್ನು ಬೈದು ಓಡಿಸಿದರೆ, ಅವನ ಸ್ಥಳಕ್ಕೆ ಇನ್ನೊಬ್ಬ ಬರುತ್ತಾನೆ. ನಿಜವಾದ ದೇಶಭಕ್ತ ಈ ವಿಷಯವನ್ನು ಆಮೂಲಾಗ್ರವಾಗಿ ಅರಿಯಬೇಕು. ಹೊಟ್ಟೆ ಬಿರಿಯುವಂತೆ ತಿಂದು ಅಜೀರ್ಣವಾಗಿದ್ದರೆ, ಇದು ನೀರಿನ ದೋಷ ಎಂದರೆ ಆದೀತೆ? ಅಜೀರ್ಣ ಹೋಗದು. ರೋಗದ ಮೂಲವನ್ನು ನಿದಾನ ಮಾಡಿದವನೇ ನಿಜವಾದ ವೈದ್ಯ. ಭಾರತದ ರೋಗಕ್ಕೆ ಚಿಕಿತ್ಸೆ ಮಾಡಬೇಕೆಂದರೆ, ರೋಗದ ಮೂಲವನ್ನು ಅರಿತುಕೊಳ್ಳಲೇಬೇಕು.

**ಓದುಗ :** ನೀವು ಹೇಳಿದುದು ಸರಿ. ನನಗೆ ತಿಳಿಸಿ ಹೇಳಲು ನೀವು ಇನ್ನು ಕಷ್ಟಪಟ್ಟು ಯುಕ್ತಿ ಹುಡುಕಬೇಕಾಗಿಲ್ಲ. ಮುಂದೆ ನಿಮ್ಮ ವಿಚಾರವೇನೋ ತಿಳಿದು ಕೊಳ್ಳಲು ನನಗೇ ಹುರುಪು. ಇದೀಗ ಬಹಳ ಸ್ವಾರಸ್ಯವಾದ ಘಟ್ಟ. ನೀವು ಹೇಳುತ್ತ ಬನ್ನಿ. ನನಗೆ ಅನುಮಾನ ಬಂದ ಕಡೆ ಪ್ರಶ್ನೆ ಕೇಳುತ್ತೇನೆ.

**ಸಂಪಾದಕ :** ಸರಿ. ಎಷ್ಟೋ ಹುರುಪಿದ್ದರೂ ಮುಂದೆ ನಮ್ಮ ವಿಚಾರದಲ್ಲಿ ಭೇದ ಬರುವ ಸಂಭವವಿದೆ. ಆದರೂ ನೀವು ನನ್ನನ್ನು ತಡೆದಾಗ ನಾನು ಚರ್ಚೆ ಮಾಡುತ್ತೇನೆ. ಇರಲಿ. ನಾವು ಪ್ರೋತ್ಸಾಹಿಸಿದೆವೆಂದೇ ಇಂಗ್ಲಿಷ್ ವರ್ತಕರು ಇಲ್ಲಿ ಕಾಲೂರಿದರು. ಇದು ನಮಗೆ ಗೊತ್ತಿದೆ. ನಮ್ಮ ರಾಜರುಗಳು ಪರಸ್ಪರ ಕಾದಾಡಿದಾಗ ಕುಂಪಣಿ ಬಹಾದೂರನ ನೆರವು ಬೇಡಿದರು. ವ್ಯಾಪಾರ ಯುದ್ಧ ಎರಡರಲ್ಲೂ ಕುಂಪಣಿ ಎತ್ತಿದ ಕೈ. ನೀತಿ ಅನೀತಿಯ ಜಿಜ್ಞಾಸೆಯೇ ಅವರಿಗೆ ಇರಲಿಲ್ಲ. ವ್ಯಾಪಾರ ಹೆಚ್ಚಿಸಬೇಕು. ಐಶ್ವರ್ಯ ಗಳಿಸಬೇಕು. ಇಷ್ಟೇ ಅವರ ಉದ್ದೇಶ. ನಾವೇ ಅವರಿಗೆ ಸಹಾಯ ಮಾಡಿದರೆ ಬಿಟ್ಟಾರೆ? ಅವರ ಕೋಠಿಗಳನ್ನು ಹೆಚ್ಚಿಸಿಕೊಂಡರು. ಆ ಕೋಠಿಗಳನ್ನು ರಕ್ಷಿಸಲು ಒಂದು ದಂಡನ್ನು ಕೂಡಿಸಿದರು. ಆ ದಂಡನ್ನು ನಾವೂ ಉಪಯೋಗಿಸಿಕೊಂಡೆವು. ಹೀಗಾಗಿ ಅವರನ್ನು ನಿಂದಿಸುವುದು ವ್ಯರ್ಥವಲ್ಲವೆ? ಹಿಂದೂ ಮುಸಲ್ಮಾನರಲ್ಲಿಯೂ ಆಗ ವೈಮನಸ್ಯ ವಿತ್ತು. ಕಂಪೆನಿಗೂ ಅದು ಒಂದು ಅವಕಾಶ ದೊರೆಯಿತು. ಹೀಗೆ ನಾವೇ

ನಮ್ಮ ಹಿಂದೂಸ್ಥಾನ ಪರಾಧೀನವಾಗಲು ಏನೇನು ಬೇಕೋ ಎಲ್ಲವನ್ನೂ ಮಾಡಿದೆವು. ಅದುದರಿಂದ ಹಿಂದೂಸ್ಥಾನವನ್ನು ಇಂಗ್ಲಿಷರು ಗಳಿಸಿಕೊಂಡರು ಎಂಬುದಕ್ಕಿಂತ ನಾವೇ ಹಿಂದೂಸ್ಥಾನವನ್ನು ಅವರಿಗೆ ಒಪ್ಪಿಸಿಕೊಟ್ಟೆವು ಎಂಬುದು ಸರಿ.

**ಓದುಗ :** ಸರಿ. ಇಂಗ್ಲಿಷರು ಇನ್ನೂ ಹಿಂದೂಸ್ಥಾನವನ್ನು ಹೇಗೆ ತಮ್ಮ ಅಧೀನದಲ್ಲಿಟ್ಟುಕೊಂಡಿದಾರೋ. ಹೇಳಿ.

**ಸಂಪಾದಕ :** ನಮ್ಮ ಬಲಿದಾನದಿಂದ ಈ ದೇಶವನ್ನು ಅವರ ಕೈಗೆ ಒಪ್ಪಿಸಿ ಕೊಟ್ಟಂತೆ, ಅವರ ಅಧೀನದಲ್ಲಿ ಇರುವುದಕ್ಕೂ ನಾವೇ ಅವರಿಗೆ ಸಹಾಯ ಮಾಡಿದೆವು. ಖಡ್ಗಬಲದಿಂದ ಹಿಂದೂಸ್ಥಾನವನ್ನು ಗೆದ್ದೆವು. ಖಡ್ಗಬಲದಿಂದಲೇ ಇದನ್ನು ಅಧೀನದಲ್ಲಿಟ್ಟುಕೊಂಡಿದ್ದೇವೆ ಎನ್ನುತ್ತಾರೆ ಕೆಲವರು ಇಂಗ್ಲಿಷರು. ಇವೆರಡೂ ಮಾತು ಸುಳ್ಳು. ಹಿಂದೂಸ್ಥಾನವನ್ನು ಅಧೀನದಲ್ಲಿಟ್ಟುಕೊಳ್ಳಲು ಕತ್ತಿಯೇಕೆ? ನಾವೇ ಅವರನ್ನು ಇರಗೊಟ್ಟಿದೇವೆ.

ಇಂಗ್ಲಿಷರು ಬರೀ ವರ್ತಕರು ಎಂದನಂತೆ ನೆಪೋಲಿಯನ್. ಅದು ಸರಿಯಾದ ವರ್ಣನೆ. ಅವರು ರಾಜ್ಯಗಳನ್ನು ಕಟ್ಟಿರುವುದೆಲ್ಲ ಅವರ ವ್ಯಾಪಾರಕ್ಕಾಗಿ. ಅವರ ಭೂಸೇನೆ, ನೌಕಾಬಲ ಆ ವ್ಯಾಪಾರದ ರಕ್ಷಣೆಗಾಗಿ. ಟ್ರಾನ್ಸ್‌ವಾಲ್‌ನಲ್ಲಿ ಅವರ ವ್ಯಾಪಾರಕ್ಕೆ ಅವಕಾಶವಿರಲಿಲ್ಲ. ಕೂಡಲೆ, ಇದನ್ನು ನಾವೇಕೆ ಇಟ್ಟುಕೊಳ್ಳಬೇಕು ಎಂದು ಹೇಳಿದ ಮಿ. ಗ್ಲಾಡ್‌ಸ್ಟನ್. ವ್ಯಾಪಾರಕ್ಕೆ ಒಳ್ಳೆಯ ಅವಕಾಶವಿದೆ ಎಂದು ತಿಳಿದ ಕೂಡಲೆ ಅದನ್ನು ಬಿಟ್ಟುಕೊಡಲೊಲ್ಲದೆ ಯುದ್ಧಕ್ಕೂ ಸಿದ್ಧರಾದರು. ಟ್ರಾನ್ಸ್‌ವಾಲ್ ಇಂಗ್ಲಿಷರ ಅಧೀನದಲ್ಲಿದೆ ಎಂದು ಮಿ. ಚೇಂಬರ್ಲಿನ್ ಸಂಶೋಧನೆ ಮಾಡಿದ. ಪ್ರೆಸಿಡೆಂಟ್ ಕ್ರೂಗರನ್ನು ಯಾರೋ ಕೇಳಿದರಂತೆ. 'ಚಂದ್ರಲೋಕದಲ್ಲಿ ಬಂಗಾರ ಇದೆಯೇ' ಆತ ಹೇಳಿದನಂತೆ–"ಇಲ್ಲ. ಅಲ್ಲಿ ಬಂಗಾರವಿದ್ದಿದ್ದರೆ ಈ ವೇಳೆಗೆ ಇಂಗ್ಲಿಷರು ಅದನ್ನು ಸ್ವಾಧೀನಪಡಿಸಿಕೊಳ್ಳುತ್ತಿದ್ದರು." ಹೀಗೊಂದು ಕಥೆಯಿದೆ. ಇಂಗ್ಲಿಷರಿಗೆ ಹಣವೇ ದೇವರು. ಇದನ್ನು ನೆನಪಿಟ್ಟರೆ ಎಲ್ಲಾ ಭೇದವೂ ಅರ್ಥವಾಗುತ್ತದೆ.

ಇದರಿಂದ ತಿಳಿಯುವುದಿಷ್ಟು – ನಮ್ಮ ಸ್ವಾರ್ಥಕ್ಕಾಗಿ ನಾವು ಇಂಗ್ಲಿಷರನ್ನೂ

ಇಟ್ಟುಕೊಂಡಿದ್ದೇವೆ. ಅವರ ವ್ಯಾಪಾರ ನಮಗೆ ರುಚಿಸಿದೆ. ಅವರ ಚಮತ್ಕಾರದಿಂದ ನಮ್ಮನ್ನು ಮರುಳುಮಾಡಿ, ತಮಗೆ ಬೇಕಾದುದನ್ನೆಲ್ಲ ನಮ್ಮಿಂದ ಮಾಡಿಸಿಕೊಳ್ಳುತ್ತಾರೆ. ಅದಕ್ಕಾಗಿ ಅವರನ್ನು ನಿಂದಿಸಿದರೆ, ಅವರ ರಾಜ್ಯವನ್ನೆ ಸ್ಥಿರಪಡಿಸಿದಂತಾಗುತ್ತದೆ. ಸಾಲದುದಕ್ಕೆ ನಮ್ಮ ನಮ್ಮೊಳಗೆ ಜಗಳವಾಡಿ ಅವರ ಬಲವನ್ನು ಹೆಚ್ಚಿಸುತ್ತೇವೆ.

ಮೇಲೆ ಹೇಳಿದುದನ್ನೆಲ್ಲ ಒಪ್ಪಿದರೆ, ಇಂಗ್ಲಿಷರು ಹಿಂದೂಸ್ಥಾನಕ್ಕೆ ವ್ಯಾಪಾರಕ್ಕಾಗಿ ಬಂದರು. ವ್ಯಾಪಾರಕ್ಕಾಗಿಯೆ ನೆಲೆಸಿದಾರೆ, ನಮ್ಮ ಸಹಾಯದಿಂದಲೇ ಇಲ್ಲಿ ತಳವೂರಿದಾರೆ ಎಂಬುದು ಸಿದ್ಧವಾಯಿತು. ಅವರು ಮದ್ದುಗುಂಡು ಇಟ್ಟುಕೊಂಡಿದ್ದರೆ ಅದು ನಿರುಪಯೋಗ. ಈ ಸಂದರ್ಭದಲ್ಲಿ ಜಪಾನಿನಲ್ಲಿ ಹಾರಾಡುವ ಬಾವುಟ ಇಂಗ್ಲಿಷರದು. ಜಪಾನೀಗಳದಲ್ಲ ಎಂಬುದನ್ನು ನೆನಪು ಕೊಡುತ್ತೇನೆ. ವ್ಯಾಪಾರಕ್ಕಾಗಿ ಇಂಗ್ಲಿಷರು ಜಪಾನೀಗಳೊಡನೆ ಬಂದು ಸಂಧಿ ಮಾಡಿಕೊಂಡಿದಾರೆ. ಅವರ ಉಪಾಯ ಸಾಧಿಸಿದರೆ, ಆ ದೇಶದಲ್ಲಿ ಹೇಗೆ ತಮ್ಮ ವ್ಯಾಪಾರವನ್ನು ಹರಡುತ್ತಾರೋ ನೋಡುತ್ತೀರಿ. ಇಡೀ ಜಗತ್ತೇ ನಮ್ಮ ಪದಾರ್ಥಗಳನ್ನು ಮಾರುವ ಪೇಟೆಯಾಗಬೇಕು ಎಂದು ಅವರ ಆಸೆ. ಹಾಗೆ ಮಾಡಲು ಸಾಧ್ಯವಿಲ್ಲವೆಂಬುದು ನಿಜ. ಅದಕ್ಕಾಗಿ ಅವರನ್ನು ನಿಂದಿಸಬೇಕಾಗಿಲ್ಲ. ಕಿಂಚಿತ್ತೂ ಲೋಪವಿಲ್ಲದಂತೆ ಅವರು ಸಮಸ್ತ ಪ್ರಯತ್ನವನ್ನೂ ಮಾಡಿಯಾರು.

# ಅಧ್ಯಾಯ - 8

## ಹಿಂದೂಸ್ಥಾನದ ಸ್ಥಿತಿ

**ಓದುಗ :** ಹಿಂದೂಸ್ಥಾನ ಇಂಗ್ಲಿಷರ ಅಧೀನದಲ್ಲಿ ಏಕೆ ಇದೆಯೋ ತಿಳಿಯಿತು. ಹಿಂದೂಸ್ಥಾನದ ಪರಿಸ್ಥಿತಿಯ ಬಗ್ಗೆ ನಿಮ್ಮ ಅಭಿಪ್ರಾಯವೇನೋ ಹೇಳುತ್ತೀರಾ?

**ಸಂಪಾದಕ :** ಈಗ ಹಿಂದೂಸ್ಥಾನದ ಸ್ಥಿತಿ ಬಹಳ ಶೋಚನೀಯ. ಅದನ್ನು ನೆನೆದರೆ ನನ್ನ ಕಣ್ಣೊಳಗೆ ನೀರು ತುಂಬುತ್ತದೆ; ಗಂಟಲು ಬಿಗಿಯುತ್ತದೆ. ನನ್ನ ಮನಸ್ಸಿನಲ್ಲಿ ಏನಿದೆಯೋ ಅದನ್ನು ಪೂರ್ಣವಾಗಿ ಹೇಳಬಲ್ಲೆನೋ ಇಲ್ಲವೋ ನನಗೇ ಸಂದೇಹ. ನನ್ನ ದೃಢಾಭಿಪ್ರಾಯ ಹೀಗೆ; ಹಿಂದೂಸ್ಥಾನ ಇಂಗ್ಲಿಷರ ಭಾರಕ್ಕೆ ತಿಣುಕುತ್ತಿಲ್ಲ, ಆಧುನಿಕ ನಾಗರಿಕತೆಯ ಭಾರದಿಂದ ತಿಣುಕುತ್ತಿದೆ. ಆ ರಾಕ್ಷಸನ ಭಾರಕ್ಕೆ ಕಿರುಗುಟ್ಟುತ್ತಿದೆ. ಈಗಲೂ ಕೈಮೀರಿಲ್ಲ. ಅದರ ಹಿಡಿತದಿಂದ ಬಿಡಿಸಿಕೊಳ್ಳಬಹುದು. ಆದರೆ ದಿನಗಳು ಕಳೆದಂತೆಲ್ಲ ಕಠಿಣವಾಗುತ್ತದೆ. ನನಗೆ ಧರ್ಮ ಇಷ್ಟ. ಹಿಂದೂಸ್ಥಾನ ಧರ್ಮಭ್ರಷ್ಟವಾಗುತ್ತಿದೆಯಲ್ಲ ಎಂಬುದೇ ನನ್ನ ಪ್ರಥಮ ದುಃಖ. ಧರ್ಮ ಎಂದರೆ ಹಿಂದೂ, ಮಹಮ್ಮದೀಯ, ಪಾರಸೀ ಧರ್ಮಗಳಲ್ಲ; ಈ ಎಲ್ಲಾ ಧರ್ಮಗಳಿಗೂ ಆಧಾರಭೂತವಾದ ಧರ್ಮ. ನಾವು ಭಗವಂತನಿಗೆ ವಿಮುಖವಾಗಿ ಹೋಗುತ್ತಿದ್ದೇವೆ.

**ಓದುಗ :** ಅದು ಹೇಗೆ?

**ಸಂಪಾದಕ :** ನಾವು ಸೋಮಾರಿಗಳು, ಇಂಗ್ಲಿಷರು ಪರಿಶ್ರಮಿಗಳು ಎಂದು ನಮ್ಮ ಮೇಲೆ ಒಂದು ಅಪವಾದವಿದೆ. ಈ ಅಪವಾದವನ್ನು ನಾವು ಒಪ್ಪಿ ಕೊಂಡಿದ್ದೇವೆ. ಅದರಿಂದ ನಮ್ಮ ಪರಿಸ್ಥಿತಿಯನ್ನು ಬದಲಿಸಲು ಬಯಸು ತ್ತಿದ್ದೇವೆ. ಆದರೆ, ಹಿಂದೂ ಇಸ್ಲಾಂ ಪಾರಸೀ ಈಸಾಯಿ ಇತ್ಯಾದಿ ಧರ್ಮಗಳೆಲ್ಲ

ಈ ಪ್ರಪಂಚದ ವ್ಯವಹಾರಕ್ಕೆ ವಿಮುಖರಾಗಿ ಧಾರ್ಮಿಕ ಜೀವನದಲ್ಲಿ ಆಸಕ್ತರಾಗಬೇಕೆಂದು ತಿಳಿಸಿ ಹೇಳುತ್ತವೆ. ನಮ್ಮ ಪ್ರಾಪಂಚಿಕ ಆಸೆ–ಆಕಾಂಕ್ಷೆಗಳು ಮಿತವಾಗಿರಬೇಕೆಂದೂ ಧಾರ್ಮಿಕ ಆಕಾಂಕ್ಷೆ ಅಮಿತ, ಅಪಾರ ಆಗಿರಬೇಕೆಂದೂ ಹೇಳುತ್ತವೆ. ನಮ್ಮ ಕೃಷಿ–ಪ್ರಯತ್ನಗಳೆಲ್ಲವೂ ಆ ದಿಕ್ಕಿನಲ್ಲಿರಬೇಕು.

ಓದುಗ : ಧರ್ಮದ ಸೋಗನ್ನು ನೀವು ಪ್ರೋತ್ಸಾಹಿಸುವಂತೆ ಕಾಣುತ್ತದೆ. ಹೀಗೆಯೆ ಮಾತನಾಡಿ ಎಷ್ಟೋ ಮಂದಿ ಧೂರ್ತರು ಲೋಕವನ್ನು ಮೋ ಗೊಳಿಸಿದ್ದಾರೆ.

ಸಂಪಾದಕ : ನೀವು ಧರ್ಮದ ಮೇಲೆ ಸುಳ್ಳು ಆರೋಪ ಹೊರಿಸುತ್ತಿದ್ದೀರಿ. ಎಲ್ಲಾ ಧರ್ಮಗಳಲ್ಲಿಯೂ ಪಾಖಂಡಿಗಳು ಇದ್ದೇ ಇದ್ದಾರೆ. ಬಿಸಿಲಿದ್ದಲ್ಲಿ ನೆರಳೂ ಇದೆ. ಆದರೆ ಪ್ರಾಪಂಚಿಕ ಪಾಖಂಡಿಗಳಿಗಿಂತ ಧಾರ್ಮಿಕ ಪಾಖಂಡಿಗಳು ಎಷ್ಟೋ ಲೇಸು ಎನ್ನುತ್ತೇವೆ. ನಾನು ತೋರಿಸುತ್ತಿರುವ ಈ ನಾಗರಿಕತೆಯ ಪಾಖಂಡಿಗಳು ಧರ್ಮದಲ್ಲಿ ಎಲ್ಲಿಯೂ ಕಾಣಬಾರರು.

ಓದುಗ : ಅದು ಹೇಗೆ ಹೇಳುತ್ತೀರಿ? ಧರ್ಮದ ಹೆಸರಿನಲ್ಲಿಯೇ ತಾನೆ ಹಿಂದೂ ಮುಸ್ಲಿಮರು ಹೊಡೆದಾಡಿದುದು. ಧರ್ಮಕ್ಕಾಗಿಯೆ ಈಸಾಯಿಗಳು ತಮ್ಮ ತಮ್ಮೊಳಗೆ ಕಾದಾಡಿದುದು. ಸಾವಿರಾರು ಜನ ನಿರಪರಾಧಿಗಳು ಕೊಲೆಯಾದರು. ಸಾವಿರಾರು ಜನರನ್ನು ಸುಟ್ಟರು. ಚಿತ್ರ ಹಿಂಸೆ ಮಾಡಿದರು; ಎಲ್ಲವೂ ಧರ್ಮಕ್ಕಾಗಿಯೇ, ಇದಕ್ಕಿಂತ ನಾಗರಿಕತೆ ಎಷ್ಟೋ ಲೇಸಲ್ಲವೆ?

ಸಂಪಾದಕ : ನಾಗರಿಕತೆಯ ದುಃಖಗಳಿಗಿಂತ ನೀವು ಹೇಳುವ ಈ ದುಃಖಗಳೆಲ್ಲ ಹೆಚ್ಚು ಸಹನೀಯವೆಂದು ನನ್ನ ಅಭಿಪ್ರಾಯ. ನೀವು ಹೇಳಿದ ಅತ್ಯಾಚಾರಗಳೆಲ್ಲ ಧರ್ಮದ ಹೆಸರಿನಲ್ಲಿಯೆ ಮಾಡಿದವುಗಳಾಗಿದ್ದರೂ ಅವಕ್ಕೂ ಧರ್ಮಕ್ಕೂ ಏನು ಸಂಬಂಧವಿಲ್ಲವೆಂಬುದು ಎಲ್ಲರಿಗೂ ಗೊತ್ತು. ಆದುದರಿಂದ ಈ ಪಾಖಂಡಿಗಳ ತರುವಾಯ ಈ ಅತ್ಯಾಚಾರಗಳು ಕೊನೆಗಾಣುತ್ತವೆ. ಅಜ್ಞಾನಿಗಳೂ ಭೋಳೇ ಜನರೂ ಇರುವಲ್ಲಿ ಹೀಗೆಯೇ ಆದರೆ ನಾಗರಿಕತೆಯ ಬೆಂಕಿಯಲ್ಲಿ ಬೂದಿಯಾಗುವವರಿಗೆ ಕೊನೆಯೆ ಇಲ್ಲ. ಅದರಲ್ಲೊಂದು ವಿಚಿತ್ರ; ಇದು ಬಹಳ ಒಳ್ಳೆಯದು ಎಂದು ತಿಳಿದು ಜನ ಈ ಬೆಂಕಿಯಲ್ಲಿ ಧುಮುಕುತ್ತಾರೆ.

ಅದರ ಫಲವಾಗಿ, ಇಹ-ಪರ ಎರಡನ್ನೂ ಕಳೆದುಕೊಳ್ಳುತ್ತಾರೆ. ಪೂರಾ ಅಧಾರ್ಮಿಕ ರಾಗುತ್ತಾರೆ. ಮೆಲುಗಡೆ ಹಾಯಾಗಿದ್ದರೂ ಒಳಗಡೆ ಕಡಿದು ಹಾಕುವ ಇಲಿಯಂತೆ ಈ ನಾಗರಿಕತೆ. ನಾಗರಿಕತೆಯ ಪೂರಾ ಪರಿಣಾಮ ತಿಳಿದಾಗ, ಈ ನಾಗರಿಕತೆಗಿಂತ ಧಾರ್ಮಿಕ ಅಂಧಶ್ರದ್ಧೆ ಕಡಿಮೆ ಹಾನಿಕರವೆಂಬುದು ಅರ್ಥವಾಗುತ್ತದೆ. ಅಂಧಶ್ರದ್ಧೆ ಯನ್ನು ಸ್ಥಿರವಾಗಿಸಬೇಕೆಂದು ನಾವು ಹೇಳುತ್ತಿಲ್ಲ. ಪೂರ್ಣ ಶಕ್ತಿಯಿಂದ ಅದನ್ನು ಇದಿರಿಸಿ ಹೊಡೆದಾಡೋಣ, ಆದರೆ, ಧರ್ಮವನ್ನು ಅಲ್ಲಗಳೆದಲ್ಲ ಹೊಡೆದಾಡ ಬೇಕಾದುದು, ನಿಜವಾದ ಧರ್ಮಮಾರ್ಗದಲ್ಲಿ ನಡೆದು.

**ಓದುಗ :** ಹಾಗಾದರೆ ಇಂಗ್ಲಿಷರು ಹಿಂದೂಸ್ಥಾನಕ್ಕೆ ನೀಡಿರುವ ಶಾಂತಿ-ಸುಖ ಬರೀ ವ್ಯರ್ಥ, ಭಾರ ಎನ್ನುತ್ತೀರ, ನೀವು.

**ಸಂಪಾದಕ :** ನಿಮಗೆ ಶಾಂತಿ-ಸುಖ ಕಾಣುತ್ತದೆಯೇನೋ, ನನಗಂತೂ ಕಾಣದು.

**ಓದುಗ :** ಹಾಗಾದರೆ ನಮ್ಮ ದೇಶದಲ್ಲಿ ಕಂಟಕರಾಗಿದ್ದ ಠಕ್ಕರು ಪಿಂಡಾರಿಗಳು, ಭಿಲ್ಲರು ಇವರ ಪೀಡೆಯ ಲೆಕ್ಕವೇ ಇಲ್ಲವೇನು ನಿಮಗೆ?

**ಸಂಪಾದಕ :** ಸ್ವಲ್ಪ ವಿಚಾರಮಾಡಿ ನೋಡಿ. ಈ ಪೀಡೆ ನೀವು ಹೇಳುವಷ್ಟು ಭಯಂಕರವಾಗಿರಲಿಲ್ಲವೆಂಬುದು ತಿಳಿಯುತ್ತದೆ. ನಿಜವಾಗಿ ಅಷ್ಟು ಭಯಂಕರ ವಾಗಿದ್ದರೆ ಇಂಗ್ಲಿಷರು ಬರುವ ಮೊದಲೇ ಎಲ್ಲರೂ ನಾಶವಾಗಬೇಕಾಗಿತ್ತು. ಅಲ್ಲದೆ, ಈಗಿರುವ ಶಾಂತಿ ಹೆಸರಿಗೆ ಮಾತ್ರ, ಈ ಶಾಂತಿಯಿಂದ ನಾವು ಹೇಡಿಗಳೂ ನಪುಂಸಕರೂ ಆಗಿದೇವೆ. ಭಿಲ್ಲರ ಪಿಂಡಾರಿಗಳ ಸ್ವಭಾವವನ್ನು ಬದಲಿಸಲಿಲ್ಲ ಇಂಗ್ಲಿಷರು. ಆದುದರಿಂದ ಇತರರು ಯಾರೋ ಬಂದು ನಮ್ಮನ್ನು ಕಾಪಾಡಿ ಹೇಡಿಗಳನ್ನಾಗಿ ಮಾಡುವುದಕ್ಕಿಂತ ಪಿಂಡಾರಿಗಳ ಕಾಟವನ್ನು ಸಹಿಸುವುದೇ ಮೇಲು. ಹೀಗೆ ನಪುಂಸಕನಾಗುವುದಕ್ಕಿಂತ ಭಿಲ್ಲರ ಬಾಣಕ್ಕೆ ತುತ್ತಾಗುವುದೇ ನನಗೆ ಇಷ್ಟವಾದೀತು. ಈ ರಕ್ಷಣೆಯಿಲ್ಲದಿದ್ದಾಗಿನ ಹಿಂದೂಸ್ಥಾನದ ವೈಭವವೇ ಬೇರೆ. ಹಿಂದೂಸ್ಥಾನದವರು ಹೇಡಿಗಳು ಎಂದು ಮೆಕಾಲೆ ತನ್ನ ಘೋರ ಅಜ್ಞಾನವನ್ನು ತೋರಿಸಿದ. ಹಿಂದೂಸ್ಥಾನಿಗಳು ಎಂದಿಗೂ ಹೇಡಿಗಳಲ್ಲ. ಗುಡ್ಡಗಾಡಿನ ಗಡುಸುಗಾರರು ವಾಸವಾಗಿರುವ ದೇಶದಲ್ಲಿ, ಹುಲಿ ಚಿರತೆಗಳು

ಧಾರಾಳವಾಗಿ ತಿರುಗಾಡುವ ದೇಶದಲ್ಲಿ, ಹೇಡಿಗಳಿದ್ದಿದ್ದರೆ ಎಂದೋ ನಾಶವಾಗಿ ಹೋಗುತ್ತಿದ್ದರು. ಯಾವಾಗಲಾದರೂ ನಮ್ಮ ಹೊಲಗಳನ್ನು ನೋಡಿದೀರಾ? ಇಂದಿಗೂ ನಮ್ಮ ರೈತರು ಹೊಲಗಳಲ್ಲಿ ನಿರ್ಭಯವಾಗಿ ಮಲಗುತ್ತಾರೆ. ಇಂಗ್ಲಿಷರು ನೀವು ನಾನು, ಅವರು ಮಲಗುವ ಕಡೆ ಮಲಗಲು ಸಾಹಸ ಮಾಡಲಾರೆವು. ನಿರ್ಭಯವೆ ನಿಜವಾದ ಬಲ; ಬರೀ ಮೈಮೇಲಿನ ಮಾಂಸಖಂಡ ಅಲ್ಲ.

ನೀವು ಸ್ವರಾಜ್ಯ ಬಯಸುತ್ತೀರಿ, ಅಲ್ಲವೆ? ಈ ಭಿಲ್ಲರು ಪಿಂಡಾರಿಗಳ ಠಕ್ಕರು ನಮ್ಮ ದೇಶದವರೇ ಎಂಬುದನ್ನು ನೆನಪಿಡಿ. ಅವರನ್ನು ಗೆಲ್ಲುವುದು ನಮ್ಮ ಕೆಲಸ. ನಾವು ನಮ್ಮ ಅಣ್ಣ ತಮ್ಮಂದಿರನ್ನು ಕಂಡೇ ಅಂಜುವವರೆಗೆ ನಮ್ಮ ಗುರಿಯನ್ನು ಮುಟ್ಟಲಾರೆವು, ಖಂಡಿತ.

■

## ಅಧ್ಯಾಯ - 9

# ಹಿಂದೂಸ್ಥಾನದ ಸ್ಥಿತಿ-ರೈಲು

**ಓದುಗ :** ಹಿಂದೂಸ್ಥಾನದ ಶಾಂತಿಯನ್ನು ಕುರಿತು ನನಗಿದ್ದ ಮೋಹವನ್ನು ನೀವು ಕಳೆದಿರಿ.

**ಸಂಪಾದಕ :** ಕೇವಲ ಧರ್ಮದ ಬಗ್ಗೆ ನನ್ನ ಅಭಿಪ್ರಾಯವನ್ನು ತಿಳಿಸಿದೆ. ಹಿಂದೂಸ್ಥಾನದ ಬಡತನದ ಬಗ್ಗೆ ನನ್ನ ವಿಚಾರಗಳನ್ನು ತಿಳಿಸಿದಾಗ ಬೇಸರ ಗೊಂಡೀರಿ. ಇದುವರೆಗೆ ಹಿಂದೂಸ್ಥಾನಕ್ಕೆ ಲಾಭಕರ ಎಂದು ನಾವು ತಿಳಿದಿದ್ದು ದೆಲ್ಲವೂ ಈಗ ಹಾನಿಕರವೆಂದೇ ನನಗೆ ಕಾಣುತ್ತದೆ.

**ಓದುಗ :** ಅದೇನು ಅಂಥದು?

**ಸಂಪಾದಕ :** ರೈಲು, ವಕೀಲರು, ವೈದ್ಯರು (ಡಾಕ್ಟರರು) ಹಿಂದೂಸ್ಥಾನವನ್ನು ಕಂಗಾಲದೇಶವಾಗಿ ಮಾಡಿದಾರೆ. ಈಗಲೇ ನಾವು ಎಚ್ಚೆರದಿದ್ದರೆ ಸರ್ವನಾಶ ವಾದೀತು.

**ಓದುಗ :** ಸರಿ ಸರಿ, ನಮ್ಮಿಬ್ಬರಿಗೂ ಏಕಾಭಿಪ್ರಾಯವಾಗುವ ಸಂಭವವೇ ಇಲ್ಲ. ಇದುವರೆಗೆ ನಾವು ಒಳ್ಳೆಯವು ಎಂದು ತಿಳಿದುದನ್ನೆಲ್ಲ ನೀವು ಟೀಕಿಸಲು ಮೊದಲಿಟ್ಟಿದೀರಿ.

**ಸಂಪಾದಕ :** ಸ್ವಲ್ಪ ತಾಳ್ಮೆಯಿರಲಿ, ನಾಗರಿಕತೆಯ ಕೆಡುಕಿನ ನಿಜ ಸ್ವರೂಪ ತಿಳಿಯಲು ಸ್ವಲ್ಪ ಕಷ್ಟವೇ ಆದೀತು. ಒಬ್ಬ ಕ್ಷಯರೋಗಿ ಸಾಯುತ್ತಿರುವಾಗಲೂ ಇನ್ನೂ ಜೀವದಾಸೆ ತೋರಿಸುತ್ತಾನೆ ವೈದ್ಯ ಕ್ಷಯರೋಗದಲ್ಲಿ ಮೇಲೆ ನೋಡಲು ಏನೂ ದುಷ್ಪರಿಣಾಮ ಕಾಣುವುದೇ ಇಲ್ಲ. ರೋಗಿಯ ಮುಖದ ಮೇಲೆ ಒಂದು

ಬಣ್ಣ ಕಾಣಿಸಿಕೊಂಡು ಗುಣವಾಗುತ್ತಿದೆಯೆಂದು ಅನಿಸುವ ಹಾಗೆಯೂ ಆಗುತ್ತದೆ. ಕಡೆಗೆ ಪ್ರಾಣನಾಶವೇ. ನಾಗರಿಕತೆ ಕಣ್ಣಿಗೆ ಕಾಣದ ಕ್ಷಯರೋಗವಿದ್ದಂತೆ, ಬಹಳ ಜೋಕೆಯಾಗಿರಬೇಕು.

**ಓದುಗ** : ಆಗಲಿ. ರೈಲಿನ ವಿಷಯ ಹೇಳಿ.

**ಸಂಪಾದಕ** : ಈ ರೈಲುಗಳು ಇರದಿದ್ದರೆ, ಇಂಗ್ಲಿಷರು ಹಿಂದೂಸ್ಥಾನವನ್ನು ಇಷ್ಟು ಮಟ್ಟಿಗೆ ಅಧೀನದಲ್ಲಿ ಇಟ್ಟುಕೊಂಡಿರಲು ಆಗುತ್ತಿರಲಿಲ್ಲ. ರೈಲು ನಮ್ಮ ದೇಶದಲ್ಲಿ ಪ್ಲೇಗನ್ನು ಹರಡಿತು. ರೈಲು ಇರದಿದ್ದರೆ ನಮ್ಮ ಜನಕೋಟಿ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಓಡಾಡಲು ಆಗುತ್ತಿರಲಿಲ್ಲ. ಈ ಅಂಟುರೋಗಗಳೂ ಹರಡುತ್ತಿರಲಿಲ್ಲ. ಇದಕ್ಕೆ ಮೊದಲು ನಮ್ಮಲ್ಲಿ ಸ್ವಾಭಾವಿಕವಾಗಿ ಪ್ರತ್ಯೇಕತೆಯಿತ್ತು. ರೈಲು ಬಂದು ಜನರು ತಮ್ಮಲ್ಲಿದ್ದ ಕಾಳನ್ನೆಲ್ಲ ಮಾರಲು ಮೊದಲಿಟ್ಟರು. ಆ ಕಾಳೆಲ್ಲವೂ ಎಲ್ಲಿ ತುಟ್ಟಿಯೋ ಅಲ್ಲಿಗೆ ಸಾಗಿ ಹೋಗಲಾರಂಭಿಸಿತು. ಅದರಿಂದ ಬರಗಳೂ ಪದೇ ಪದೇ ಪೀಡಿಸತೊಡಗಿದವು. ಜನರಲ್ಲಿ ಆಸಡ್ಡೆ ಹೆಚ್ಚಾಗಿ ಕ್ಷಾಮದ ಸಂಕಟವೂ ಹೆಚ್ಚಿತು. ಮನುಷ್ಯನ ದುಷ್ಟತನಕ್ಕೆ ರೈಲು ಪ್ರೋತ್ಸಾಹ ಕೊಟ್ಟಿತು. ಕೆಟ್ಟ ಜನ ತಮ್ಮ ದುಷ್ಟ ಕಾರ್ಯಗಳನ್ನು ಬಹಳ ಬೇಗ ಸಾಧಿಸಿಕೊಳ್ಳಲು ಅವಕಾಶವಾಯಿತು. ಹಿಂದೂಸ್ಥಾನದ ಪುಣ್ಯ ಕ್ಷೇತ್ರಗಳು ಅಪವಿತ್ರವಾದವು. ಹಿಂದೆ, ಈ ಕ್ಷೇತ್ರಗಳಿಗೆ ಅತ್ಯಂತ ಪ್ರಯಾಸದಿಂದ ಹೋಗಿಬರಬೇಕಾಗಿತ್ತು. ಆದ್ದರಿಂದ ನಿಜವಾಗಿ ಭಕ್ತಿಯುಳ್ಳವರು ಮಾತ್ರವೇ ಹೋಗುತ್ತಿದ್ದರು. ಈಗ ದುಷ್ಟರು ತಮ್ಮ ದುಷ್ಟಕಾರ್ಯಗಳನ್ನು ನಡೆಸಲು ಅಲ್ಲಿಗೆ ಹೋಗುತ್ತಾರೆ.

**ಓದುಗ** : ಇದು ಏಕಪಕ್ಷದ ಮಾತಾಯಿತು. ಕೆಟ್ಟವರೂ ಹೋಗಬಹುದು ಕ್ಷೇತ್ರಗಳಿಗೆ, ಒಳ್ಳೆಯವರೂ ಹೋಗಬಹುದು. ಒಳ್ಳೆಯ ಜನರೇಕೆ ರೈಲಿನ ಉಪಯೋಗವನ್ನು ಪೂರ್ಣವಾಗಿ ಮಾಡಿಕೊಳ್ಳಬಾರದು?

**ಸಂಪಾದಕ** : ಒಳ್ಳೆಯದಕ್ಕೆ ಇರುವೆಯ ವೇಗ, ಅದಕ್ಕೂ ರೈಲಿಗೂ ಎಲ್ಲಿಯ ಜೋಡಿ. ಒಳ್ಳೆಯದನ್ನು ಮಾಡಬೇಕೆನ್ನುವವರು ಸ್ವಾರ್ಥಿಗಳಲ್ಲ. ಅವರಿಗೆ ಅವಸರವಿಲ್ಲ. ಅವರು ಬಲ್ಲರು. ಮನುಷ್ಯರ ಮೇಲೆ ಒಳ್ಳೆಯದರ ಪ್ರಭಾವ ಬೀಳಲು ಬಹುಕಾಲ ಬೇಕು. ಆದರೆ ಪಾಪಕ್ಕೆ ರೆಕ್ಕೆಯಿವೆ. ಮನೆ ಕಟ್ಟಲು ಬಹು

ಕಾಲ ಬೇಕು. ಮನೆ ಕೆಡವಲು ಎಷ್ಟು ಕಾಲ? ಕುಂಬಾರನಿಗೆ ವರುಷ ದೊಣ್ಣೆಗೆ ನಿಮಿಷ. ಆದುದರಿಂದ ರೈಲು ಕೆಟ್ಟುದನ್ನೆ ಹರಡಬಲ್ಲದೇ ವಿನಾ ಒಳ್ಳೆಯದನ್ನಲ್ಲ. ರೈಲಿನಿಂದ ಬರ ಹೆಚ್ಚುತ್ತದೆಯೋ ಇಲ್ಲವೋ ಎಂಬುದು ವಿವಾದಾಸ್ಪದವಾದೀತು. ಆದರೆ ರೈಲಿನಿಂದ ಕೆಟ್ಟದು ಹರಡುತ್ತದೆ ಎಂಬುದು ನಿರ್ವಿವಾದ.

**ಓದುಗ:** ಏನೇ ಇರಲಿ, ರೈಲಿನಿಂದಲೇ ತಾನೆ ಹಿಂದೂಸ್ಥಾನದಲ್ಲಿ ರಾಷ್ಟ್ರೀಯತೆಯ ಭಾವನೆ ವ್ಯಾಪಿಸಿದುದು. ಅದೊಂದೆ ಸಾಕು, ರೈಲಿನಿಂದ ಆಗುವ ನಷ್ಟಗಳನ್ನು ತಳ್ಳಿಹಾಕಲಿಕ್ಕೆ.

**ಸಂಪಾದಕ:** ಇದೊಂದು ಭ್ರಾಂತಿ. ನಾವು ಮೊದಲು ಒಂದು ರಾಷ್ಟ್ರವಾಗಿರಲಿಲ್ಲ. ನಮ್ಮಲ್ಲಿ ರಾಷ್ಟ್ರೀಯತೆ ಬೆಳೆಯಲು ಶತಶತಮಾನಗಳು ಬೇಕು ಎಂದು ಇಂಗ್ಲಿಷರು ನಮಗೆ ಹೇಳಿ ಪಾಠ ಮಾಡಿಸಿದ್ದಾರೆ. ಇದಕ್ಕೆ ಬುಡವಿಲ್ಲ. ಅವರು ಹಿಂದೂಸ್ಥಾನಕ್ಕೆ ಬರುವ ಮೊದಲೇ ನಾವು ಒಂದು ರಾಷ್ಟ್ರವಾಗಿದ್ದೆವು. ವಿಚಾರಧಾರೆ ಒಂದೇ, ನಮ್ಮ ಬಾಳು-ಬದುಕು ಒಂದೇ ಬಗೆ. ನಾವು ಒಂದು ರಾಷ್ಟ್ರವಾಗಿದ್ದುದರಿಂದಲೇ ಇಂಗ್ಲಿಷರಿಗೆ ಇಲ್ಲಿ ಒಂದೇ ರಾಜ್ಯ ಕಟ್ಟಲು ಅವಕಾಶವಾದುದು. ಆಮೇಲೆ ಅವರೇ ಬಿತ್ತಿದುದು ಈ ಭೇದ ಭಾವವೆಲ್ಲ.

**ಓದುಗ:** ಇನ್ನು ಸ್ವಲ್ಪ ವಿವರಿಸಿ ಹೇಳಿ.

**ಸಂಪಾದಕ :** ನಾವು ಒಂದೇ ರಾಷ್ಟ್ರವಾಗಿದ್ದೆವು ಎಂದರೆ ನಮ್ಮಲ್ಲಿ ಭೇದಗಳೇ, ಇರಲಿಲ್ಲ ಎಂದಲ್ಲ. ಆದರೆ ನಮ್ಮ ಹಿರಿಯರು ಎತ್ತಿನಗಾಡಿಗಳಲ್ಲಿಯೋ ಕಾಲ್ನಡಿಗೆ ಯಿಂದಲೋ ಇಡೀ ಹಿಂದೂಸ್ಥಾನದಲ್ಲಿ ದೇಶಾಟನೆ ಮಾಡುತ್ತಿದ್ದರು. ಪರಸ್ಪರ ಭಾಷೆಗಳನ್ನು ಕಲಿಯುತ್ತಿದ್ದರು. ಅವರಲ್ಲಿ ಪ್ರತ್ಯೇಕತೆ ಸ್ವಲ್ಪವೂ ಇರುತ್ತಿರಲಿಲ್ಲ. ದಕ್ಷಿಣದಲ್ಲಿ ರಾಮೇಶ್ವರ, ಪೂರ್ವದಲ್ಲಿ ಜಗನ್ನಾಥಪುರಿ, ಉತ್ತರದಲ್ಲಿ ಹರಿದ್ವಾರ, ಇವನ್ನು ಯಾತ್ರಾಸ್ಥಳಗಳಾಗಿ ವಿಧಿಸಿದ ನಮ್ಮ ಹಿರಿಯರ ಉದ್ದೇಶವೇನಿರಬಹುದು? ಅವರು ಮೂರ್ಖರಲ್ಲವೆಂದು ನೀವು ಒಪ್ಪುತ್ತೀರಷ್ಟೆ. ಮನೆಯಲ್ಲಿಯೇ ದೇವರ ಪೂಜೆ ಮಾಡಬಹುದು ಎಂಬುದು ಅವರಿಗೆ ಗೊತ್ತಿರಲಿಲ್ಲವೇ? ಮನಸ್ಸು ಶುದ್ಧ ವಾಗಿದ್ದರೆ ಮನೆಯೊಳಗೇ ಗಂಗಾತೀರ್ಥ ಎನ್ನಲಿಲ್ಲವೆ ಅವರು? ಮನವೆ ಗಂಗೆ, ಮನೆಯೆ ಕಾಶಿ ಎಂದರು. ಆದರೆ ಪ್ರಕೃತಿಯ ಕೃಪೆಯಿಂದ ಹಿಂದೂಸ್ಥಾನ

ಅವಿಭಕ್ತ ಅಖಂಡ ದೇಶ ಎಂಬುದನ್ನು ಅವರು ಮನಗಂಡರು. ಹಿಂದೂಸ್ಥಾನದ ಬೇರೆ ಬೇರೆ ಭಾಗಗಳಲ್ಲಿ ಯಾತ್ರಾಸ್ಥಳಗಳನ್ನು ವಿಧಿಸಿ, ಜಗತ್ತಿನಲ್ಲ ಬೇರೆಲ್ಲಿಯೂ ಕಾಣಬಾರದಂಥ ಒಂದು ವಿಶಿಷ್ಟ ರಾಷ್ಟ್ರೀಯತೆಯನ್ನು ಮೊಳೆಯಿಸಿದರು. ಇಬ್ಬರು ಇಂಗ್ಲಿಷರು ಒಂದಲ್ಲ; ಅವರಿಗಿಂತ ಹೆಚ್ಚು ಒಂದು, ಏಕ ಹಿಂದೂಸ್ಥಾನಿಗಳು. ಈ ನಾಗರಿಕತೆಯ ಬಲೆಗೆ ಬಿದ್ದ ನಾನು ನೀವು, ನಮ್ಮಂಥವರು ಹಿಂದೂಸ್ಥಾನ ಒಂದು ರಾಷ್ಟ್ರವಲ್ಲ. ನಾನಾ ಜನಾಂಗಗಳ ಕಲಸು ಮೇಲೋಗರ ಎಂದು ಭಾವಿಸುತ್ತೇವೆ. ರೈಲು ಬಂದ ಮೇಲೆಯೇ ನಮ್ಮೊಳಗೆ ಈ ಭೇದ ಅಳಿದು ಏಕ ರಾಷ್ಟ್ರೀಯತೆ ಬರುತ್ತಿದೆ ಎಂದರೆ ಏನು ಹೇಳಬೇಕು? ಅಫೀಮಿನ ಚಟ ಹತ್ತಿದ ಮೇಲೆಯೇ ನನಗದರ ಕೆಡುಕು ತಿಳಿದದ್ದು; ಅಷ್ಟು ತಿಳಿಸಿತಲ್ಲ. ಆದ್ದರಿಂದ ಅಫೀಮು ಒಳ್ಳೆಯದು ಎಂದಹಾಗೆ ಇದು. ನಾನು ರೈಲಿನ ಬಗ್ಗೆ ಏನು ಹೇಳಿದೆನೋ ಅದನ್ನು ಚೆನ್ನಾಗಿ ಆಲೋಚಿಸಿ ನೋಡಿ.

**ಓದುಗ :** ಅಗತ್ಯವಾಗಿ. ಆದರೆ ಈಗ ಒಂದು ಪ್ರಶ್ನೆ ತೋಚುತ್ತಿದೆ. ನೀವು ಹೇಳಿದುದೆಲ್ಲ ಹಿಂದೂಸ್ಥಾನಕ್ಕೆ ಮುಸಲ್ಮಾನರು ಬರುವುದಕ್ಕೆ ಹಿಂದಿನ ಮಾತು. ಈಗ ಇಲ್ಲಿ ಮುಸಲ್ಮಾನರು, ಪಾರಸಿಗಳು, ಈಸಾಯಿಗಳು ಇದಾರೆ. ಇವರೆಲ್ಲ ಒಂದು ಜನಾಂಗ ರಾಷ್ಟ್ರ ಆದಾರೆ? ಹಿಂದೂ–ಮುಸಲ್ಮಾನರಲ್ಲಿ ಹಳೆಯ ಹಗೆತನವಿದ್ದೇ ಇದೆ. ನಮ್ಮ ಗಾದೆಗಳೇ ಅದನ್ನು ಹೇಳುತ್ತವೆ. ದೇವರಿಗೆ ಕೈಮುಗಿಯಲು ಹಿಂದೂ ಪೂರ್ವಕ್ಕೆ ತಿರುಗಿದರೆ, ಮುಸಲ್ಮಾನ ಪಶ್ಚಿಮಕ್ಕೆ ತಿರುಗುತ್ತಾನೆ. ಹಿಂದೂಗಳು ವಿಗ್ರಹರಾಧಕರು ಎಂದು ಮುಸಲ್ಮಾನರಿಗೆ ತಿರಸ್ಕಾರ. ಹಿಂದೂಗಳು ಗೋಪೂಜೆ ಮಾಡುತ್ತಾರೆ. ಮುಸಲ್ಮಾನರು ಗೋಹತ್ಯೆ ಮಾಡುತ್ತಾರೆ. ಹಿಂದೂಗಳು ಅಹಿಂಸಕರು, ಮುಸಲ್ಮಾನರು ಅಹಿಂಸಕರಲ್ಲ–ಹೀಗೆ ಹೆಜ್ಜೆ ಹೆಜ್ಜೆಗೂ ವಿರೋಧಗಳಿವೆ. ಇಂಥದರಲ್ಲಿ ಹಿಂದೂಸ್ಥಾನ ಒಂದು ರಾಷ್ಟ್ರವಾದೀತೆ? ಹೇಗೆ?

■

## ಅಧ್ಯಾಯ – 10

# ಹಿಂದೂ – ಮುಸಲ್ಮಾನ

**ಸಂಪಾದಕ:** ನಿಮ್ಮ ಕಡೆಯ ಪ್ರಶ್ನೆ ಬಹಳ ಗಂಭೀರವಾದುದು. ಆದರೂ ವಿಚಾರ ಮಾಡಿದರೆ ಉತ್ತರ ಸುಲಭ. ರೈಲುಗಳು, ವಕೀಲರು, ವೈದ್ಯರು ಇರುವುದರಿಂದ ಈ ಪ್ರಶ್ನೆ ಹುಟ್ಟುತ್ತದೆ. ರೈಲಿನ ವಿಷಯ ಹೇಳಿದೆ. ಉಳಿದೆರಡನ್ನೂ ಆಮೇಲೆ ಚರ್ಚಿಸೋಣ. ತನ್ನ ಕೈಕಾಲು ಎಷ್ಟು ದೂರ ಒಯ್ಯಬಲ್ಲವೋ ಅದೇ ಮನುಷ್ಯನ ಓಡಾಟದ ಮಿತಿಯಾಗಬೇಕು. ನಿಸರ್ಗವೇ ಹಾಗೆ ಮಾಡಿದೆ. ಈ ರೈಲು ಮುಂತಾದ ಉನ್ಮತ್ತ ವೇಗದ ವಾಹನಗಳಲ್ಲಿ ನಮ್ಮ ಓಟ, ಅಲೆದಾಟ ಅತಿಯಾಗಿರದಿದ್ದರೆ ಎಷ್ಟೋ ಗೊಂದಲ ಕಡಿಮೆಯಾಗುತ್ತಿತ್ತು. ನಮ್ಮ ಕಷ್ಟಗಳೆಲ್ಲಾ ನಾವೇ ಮಾಡಿಕೊಂಡವು. ದೇವರು ಮನುಷ್ಯನಿಗೆ ಈ ಶರೀರವನ್ನು ಕೊಟ್ಟಾಗಲೇ ಅದರ ರಚನೆಯಲ್ಲಿಯೆ ಅವನ ಓಡಾಟಕ್ಕೆ ಮಿತಿಯನ್ನು ಕಲ್ಪಿಸಿಟ್ಟಿದಾನೆ. ಅ ಮಿತಿಯನ್ನು ಮೀರುವ ಉಪಾಯಗಳನ್ನು ಹುಡುಕುತ್ತಲೇ ಇದಾನೆ ಮನುಷ್ಯ. ಸೃಷ್ಟಿಕರ್ತನನ್ನು ಅರಿತುಕೊಳ್ಳಲಿ ಎಂದು ದೇವರು ಮನುಷ್ಯನಿಗೆ ಬುದ್ಧಿಯನ್ನು ನೀಡಿದ. ಆದರೆ ಮನುಷ್ಯ ಸೃಷ್ಟಿಕರ್ತನನ್ನು ಮರೆಯಲು ಆ ಬುದ್ಧಿಯನ್ನು ಉಪಯೋಗಿಸಿದ. ನನ್ನ ನೆರೆಹೊರೆಯವರ ಸೇವೆ ಮಾಡಬಲ್ಲ ಹಾಗೆ ದೇವರು ನನ್ನನ್ನು ಸೃಜಿಸಿದಾನೆ. ಆದರೆ ನನ್ನ ಗರ್ವದಿಂದ ನಾನು ಇಡೀ ವಿಶ್ವದ ಸೇವಾ ಭಾರವನ್ನೆ ಹೊತ್ತವನಂತೆ ಆಡುತ್ತೇನೆ. ಅಸಾಧ್ಯವನ್ನು ಸಾಧಿಸುವ ಈ ಪ್ರಯತ್ನದಲ್ಲಿ ಭಿನ್ನಸ್ವಭಾವ, ಭಿನ್ನಧರ್ಮಗಳ ಸಂಪರ್ಕವಾಗಿ ಮನುಷ್ಯ ದಿಗ್ಭ್ರಮೆಗೊಳ್ಳುತ್ತಾನೆ. ಈ ವಿಚಾರ ಸರಣಿಯಿಯಿಂದ ರೈಲು ನಿಜವಾಗಿ ಹಾನಿಕರವೆಂಬುದು ಅರ್ಥ ವಾಗಿರಬೇಕು. ಅದರಿಂದಾಗಿ ಮನುಷ್ಯ ತನ್ನನ್ನು ಸೃಷ್ಟಿಸಿದ ಭಗವಂತನನ್ನೆ ಮರೆತಿದ್ದಾನೆ.

**ಓದುಗ** : ಇದೆಲ್ಲ ಸರಿ. ನನ್ನ ಪ್ರಶ್ನೆಗೆ ಉತ್ತರ ಕೇಳಲು ನನಗೆ ಆತುರವಾಗಿದೆ. ಮುಸಲ್ಮಾನರು ಇಲ್ಲಿಗೆ ಬಂದುದರಿಂದ ನಮ್ಮ ರಾಷ್ಟ್ರೀಯತೆಯ ಭಂಗವಾಗಲಿಲ್ಲವೇ?

**ಸಂಪಾದಕ** : ಬೇರೆ ಬೇರೆ ಧರ್ಮದ ಜನರು ಇದ್ದರೆ ಹಿಂದೂಸ್ಥಾನ ಒಂದು ರಾಷ್ಟ್ರವಾಗದೇ ಹೋದೀತೆ? ಬೇರೆ ದೇಶಗಳಿಂದ ಹೊಸಬರು ಬಂದರೆ ರಾಷ್ಟ್ರೀಯತೆ ನಷ್ಟವಾಗದು; ಬಂದವರು ಇವರಲ್ಲಿ ಬೆರೆತು ಹೋಗುತ್ತಾರೆ. ಆ ಸ್ಥಿತಿ ಬಂದಾಗಲೇ ಒಂದು ದೇಶ ರಾಷ್ಟ್ರವಾಗುತ್ತದೆ. ಆ ದೇಶಕ್ಕೆ ಹೊರಗಿನದನ್ನು ಜೀರ್ಣಿಸಿಕೊಳ್ಳುವ ಶಕ್ತಿ ಬೇಕು. ಹಿಂದೂಸ್ಥಾನ ಯಾವಾಗಲೂ ಹೀಗೆಯೇ ಇದೆ. ನಿಜವಾಗಿ, ಎಷ್ಟು ಜನ ಮನುಷ್ಯರೋ ಅಷ್ಟು ಧರ್ಮ. ಆದರೆ ರಾಷ್ಟ್ರೀಯತೆಯ ಭಾವನೆಯುಳ್ಳವರು ಪರಸ್ಪರ ಧರ್ಮದಲ್ಲಿ ಕೈಹಾಕರು. ಹಾಗಲ್ಲದಿದ್ದರೆ ಅವರು ಒಂದು ರಾಷ್ಟ್ರವಾಗಲು ಅರ್ಹರಲ್ಲ. ಹಿಂದೂಸ್ಥಾನದಲ್ಲಿ ಬರೀ ಹಿಂದೂಗಳೇ ಇರಬೇಕು ಎಂದು ಯೋಚಿಸುವ ಹಿಂದೂಗಳು ಕನಸು ಕಾಣುತ್ತಿದ್ದಾರೆ. ಈ ದೇಶವನ್ನು ತಮ್ಮದಾಗಿ ಮಾಡಿಕೊಂಡ ಹಿಂದೂ, ಮುಸಲ್ಮಾನ, ಈಸಾಯಿ ಎಲ್ಲರೂ ದೇಶಭ್ರಾತೃಗಳು. ತಮ್ಮ ಹಿತಕ್ಕಾಗಿಯಾದರೂ ಅವರು ಐಕಮತ್ಯದಿಂದ ಬಾಳಬೇಕು. ಒಂದೇ ಧರ್ಮವಿದ್ದರೇನೇ ಒಂದು ರಾಷ್ಟ್ರ ಎಂಬುದು ಲೋಕದಲ್ಲಿ ಎಲ್ಲಿಯೂ ಇಲ್ಲ. ಹಿಂದೂಸ್ಥಾನದಲ್ಲಿಯಂತೂ ಎಂದೂ ಹಾಗೆ ತಿಳಿದಿಲ್ಲ.

**ಓದುಗ**: ಆದರೆ ಹಿಂದೂ ಮುಸಲ್ಮಾನರಲ್ಲಿರುವ ಜನ್ಮವೈರಕ್ಕೆ ಏನು ಹೇಳುತ್ತೀರಿ?

**ಸಂಪಾದಕ**: 'ಜನ್ಮವೈರ' ಎಂಬ ಶಬ್ದವನ್ನು ಹುಟ್ಟಿಸಿದವರು ನಮ್ಮಿಬ್ಬರ ಶತ್ರುಗಳು. ಹಿಂದೂಗಳು ಮುಸಲ್ಮಾನರು ಹೊಡೆದಾಡಿದಾಗ ಹಾಗೆ ಮಾತಾಡಿಕೊಂಡರು. ಅವರು ಹೊಡೆದಾಡುವುದನ್ನು ಬಿಟ್ಟು ಎಷ್ಟೋ ದಿನವಾಯಿತು. ಈಗಿನ್ನೇನು ಜನ್ಮವೈರ? ಬ್ರಿಟಿಷರು ಒಂದು ನೆಲೆಸಿದ ಮೇಲೆಯೇ ನಮ್ಮ ಹೊಡೆದಾಟ ನಿಲ್ಲಲಿಲ್ಲ; ನೆನಪಿರಲಿ. ಮುಸ್ಲಿಮ್ ಸಾಮ್ರಾಟರ ಕೆಳಗೆ ಹಿಂದೂಗಳೂ, ಹಿಂದೂ ಚಕ್ರವರ್ತಿಗಳ ಕೆಳಗೆ ಮುಸಲ್ಮಾನರೂ ಏಳಿಗೆಯಾದರು. ಪರಸ್ಪರ ಕಲಹ ಆತ್ಮಘಾತಕವೆಂಬುದನ್ನು ಎರಡೂ ಪಕ್ಷದವರು ಅರಿತುಕೊಂಡರು. ಯುದ್ಧಕ್ಕೆ ಅಂಜಿ ಯಾರೂ ತಮ್ಮ ಧರ್ಮವನ್ನು ಬಿಡರು ಎಂಬುದನ್ನು

ತಿಳಿದುಕೊಂಡರು. ಆದುದರಿಂದ ಇಬ್ಬರೂ ಕಲೆತು ಮಲೆತು ಶಾಂತಿಯಿಂದಿರಲು ನಿರ್ಧರಿಸಿದರು. ಇಂಗ್ಲಿಷರು ಬಂದರೋ ಇಲ್ಲವೋ ಈ ಜಗಳಗಳು ಮತ್ತೆ ಚಿಗುರಿದವು.

ನೀವು ಹೇಳುವ ಗಾದೆಗಳೆಲ್ಲ ಆ ಯುದ್ಧಗಳಲ್ಲಿ ಹುಟ್ಟಿದಂಥವು. ಅವನ್ನು ಈಗ ಹೇಳುವುದು ನಿಸ್ಸಂದೇಹವಾಗಿ ಹಾನಿಕಾರಕ. ಹಿಂದೂ ಮುಸಲ್ಮಾನರಲ್ಲಿ ಅನೇಕರಿಗೆ ಒಬ್ಬನೇ ಮೂಲಪುರುಷ. ಇಬ್ಬರೂ ಒಂದೇ ವಂಶದವರು. ಇಬ್ಬರೊಳಗೂ ಒಂದೇ ರಕ್ತ ಹರಿಯುತ್ತಿದೆ ಎಂಬುದನ್ನು ನಾವು ನೆನೆಯ ಬೇಡವೆ? ತಮ್ಮ ಧರ್ಮವನ್ನು ಬದಲಿಸಿದ ಮಾತ್ರಕ್ಕೆ ಜನ ವೈರಿಗಳಾಗುತ್ತಾರೆಯೇ? ಹಿಂದೂಗಳ ದೇವರು ಬೇರೆ, ಮುಸಲ್ಮಾನರ ದೇವರು ಬೇರೆಯೆ? ಬೇರೆ ಬೇರೆ ಧರ್ಮಗಳು ಬೇರೆ ಬೇರೆ ದಾರಿ; ಹೋಗುವುದು ಒಂದೇ ಕಡೆಗೆ. ಹೋಗುವುದು ಒಂದೇ ಕಡೆಗೆ ಎಂದ ಮೇಲೆ ಯಾವ ದಾರಿ ನಡೆದರೇನು? ಏಕೆ ಈ ಜಗಳ?

ಶೈವ–ವೈಷ್ಣವರಲ್ಲಿ ಎಂಥ ಘೋರವಾದ ಗಾದೆಗಳಿವೆ. ಗೊತ್ತೆ? ಆದರೂ ಇವರಿಬ್ಬರೂ ಬೇರೆ ಬೇರೆ ರಾಷ್ಟ್ರ ಎಂದು ಯಾರೂ ಹೇಳರು. ವೈದಿಕ ಧರ್ಮಕ್ಕೂ ಜೈನಮತಕ್ಕೂ ಬಹಳ ಅಂತರವಂತೆ. ಅದರಿಂದ ಜೈನರೂ ಸನಾತನಿಗಳೂ ಬೇರೆ ಬೇರೆ ರಾಷ್ಟ್ರಗಳಾದರೆ? ನಿಜವಾದ ಅಂಶ ಇಷ್ಟು; ನಾವೆಲ್ಲರೂ ಗುಲಾಮ ರಾಗಿದ್ದೇವೆ. ಅದರಿಂದ ನಮ್ಮ ನಮ್ಮೊಳಗೇ ಕಾದಾಡುತ್ತೇವೆ. ಮೂರನೆಯವರ ಬಳಿಗೆ ತೀರ್ಪಿಗಾಗಿ ಹೋಗುತ್ತೇವೆ. ಮುಸ್ಲಿಂ ವಿಗ್ರಹ ಭೇದಕರಿದ್ದಂತೆ ಹಿಂದೂಗಳು ಇದಾರೆ... ನಮ್ಮೊಳಗೆ ಜ್ಞಾನ ಹೆಚ್ಚಾದಂತೆಲ್ಲ ಬೇರೆ ಧರ್ಮಗಳನ್ನು ಅನುಸರಿಸು ವವರೊಡನೆ ನಾವು ಕಾದಾಡಬೇಕಾಗಿಲ್ಲವೆಂ ದು ನಮಗೆ ತಿಳಿಯುತ್ತದೆ.

ಓದುಗ: ಗೋರಕ್ಷಣೆಯ ಬಗ್ಗೆ ನಿಮ್ಮ ಅಭಿಪ್ರಾಯ ಹೇಳಿ ಕೇಳೋಣ.

**ಸಂಪಾದಕ:** ನಾನು ಸ್ವಯಂ ಗೋಪೂಜಕ. ಎಂದರೆ ಹಸುವನ್ನು ಆದರಿಸುತ್ತೇನೆ. ಹಿಂದೂಸ್ಥಾನ ಕೃಷಿ ಪ್ರಧಾನ ದೇಶ. ಹಿಂದೂಸ್ಥಾನದ ರಕ್ಷಣೆಗೆ ಗೋವೇ ಆಧಾರ. ಗೋವು ನಮಗೆ ನೂರಾರು ಬಗೆಯಲ್ಲಿ ಉಪಕಾರಿ. ಮುಸಲ್ಮಾನ ಸೋದರರೂ ಇದನ್ನು ಒಪ್ಪಬೇಕು.

ಆದರೆ, ಗೋಪೂಜೆ ಮಾಡುವಂತೆಯೆ ನಾನು ಮನುಷ್ಯರನ್ನೂ ಗೌರವಿಸುತ್ತೇನೆ.

ಹಿಂದೂವೋ ಮುಸಲ್ಮಾನರೋ, ಮನುಷ್ಯನೂ ಗೋವಿನಂತೆ ಉಪಕಾರಿ. ಹೀಗಿರುವಾಗ, ಒಂದು ಹಸುವನ್ನು ಕಾಪಾಡಲು ಒಬ್ಬ ಮುಸಲ್ಮಾನನನ್ನು ನಾನು ಕೊಲ್ಲಲೆ? ಹಾಗೆ ಮಾಡಿದರೆ, ನಾನು ಮುಸಲ್ಮಾನರಿಗೂ ವೈರಿಯಾದೆ, ಗೋವಿಗೂ ಘಾತಕನಾದೆ. ಆದುದರಿಂದ ನನಗೆ ತಿಳಿದ ಮಟ್ಟಿಗೆ ಗೋರಕ್ಷಣೆಗೆ ಒಂದೇ ದಾರಿ: ದೇಶದ ಹಿತಕ್ಕಾಗಿ ಗೋವನ್ನು ರಕ್ಷಿಸುವ ಕೆಲಸದಲ್ಲಿ ನೀನೂ ನನಗೆ ಜೊತೆಯಾಗು ಎಂದು ಮುಸಲ್ಮಾನ ಸೋದರನಿಗೆ ತಿಳಿಸಿ ಹೇಳುವುದು. ಅವನು ನನ್ನ ಮಾತನ್ನು ಕೇಳದಿದ್ದರೆ, ಈ ಕೆಲಸ ನನ್ನ ಶಕ್ತಿಗೆ ಮೀರಿದುದು ಎಂದು ಆ ಹಸುವನ್ನು ಕೈಬಿಡಬೇಕು. ಗೋವಿನ ಬಗ್ಗೆ ನನ್ನ ಅಂತಃಕರಣ ಅತ್ಯಂತ ದಯಾಪೂರ್ಣವಾಗಿದ್ದರೆ, ಅದನ್ನು ರಕ್ಷಿಸಲು ನನ್ನ ಪ್ರಾಣವನ್ನೆ ತೆರಬೇಕೇ ವಿನಾ ಮುಸಲ್ಮಾನ ಸೋದರರ ಪ್ರಾಣವನ್ನು ತೆಗೆಯಲಾಗದು. ಇದೆ ನಮ್ಮ ಧರ್ಮ ಎಂದು ನಾ ತಿಳಿದಿದ್ದೇನೆ.

'ಅಹುದು' 'ಅಲ್ಲ'ಗಳಿಗೆ ಯಾವಾಗಲೂ ಹಾಗೆಯೇ. ಮನುಷ್ಯ ಹಟವಾದಿಯಾದರೆ ಕಷ್ಟ. ನಾನೊಂದು ಹಟ ಹಿಡಿದರೆ ಮುಸಲ್ಮಾನ ಸೋದರ ಇನ್ನೊಂದಕ್ಕೆ ಹಟ ಹಿಡಿಯುತ್ತಾನೆ. ನಾನು ವಕ್ರವಾಗಿ ನಡೆದರೆ ಅವನೂ ವಕ್ರವಾಗಿಯೇ. ನಾನು ಸ್ವಲ್ಪ ತಲೆಬಾಗಿದರೆ ಅವನೂ ಪೂರಾ ತಲೆಬಾಗಿಯಾನು. ಒಂದು ವೇಳೆ ಅವನು ತಲೆ ಬಾಗದಿದ್ದರೂ ನಾನು ತಲೆಬಾಗಿದುದೇನು ತಪ್ಪಾಗುವುದಿಲ್ಲ. ಹಿಂದೂಗಳು ಹಟ ಹಿಡಿದ ಮೇಲೆ ಗೋಹತ್ಯೆ ಹೆಚ್ಚಿತು. ಈ ಗೋರಕ್ಷಣಾ ಸಂಘಗಳನ್ನು ಗೋಹತ್ಯಾ ಸಂಘಗಳೆಂದೇ ಹೇಳಬಹುದು. ಇಂಥಾ ಸಂಘಗಳಿರುವುದೇ ನಮಗೆ ಅವಮಾನ. ನಾವು ಗೋರಕ್ಷಣೆ ಮಾಡುವುದನ್ನು ಮರೆತಾಗಲೇ ಇಂಥ ಸಂಘಗಳು ಅಗತ್ಯವಾದುವೇನೋ!

ನನ್ನ ಸಹೋದರನೊಬ್ಬ ಗೋಹತ್ಯೆ ಮಾಡಲು ಸಿದ್ಧನಾದರೆ ನಾನೇನು ಮಾಡಬೇಕು? ಅವನನ್ನು ಕೊಂದುಹಾಕಲೋ, ಅವನ ಕಾಲಿಗೆ ಬಿದ್ದು ಗೋವನ್ನು ಕೊಲ್ಲಬೇಡ ಎಂದು ಬೇಡಿಕೊಳ್ಳಲೋ? ಬೇಡಿಕೊಳ್ಳುವುದೇ ಸರಿ ಎಂದರೆ, ಮುಸಲ್ಮಾನ ಸೋದರನನ್ನೂ ಬೇಡಿಕೊಳ್ಳಬೇಕಲ್ಲವೆ?

ಹಿಂದೂಗಳೇ ಗೋವನ್ನು ನಿಷ್ಕರುಣೆಯಿಂದ ಪೀಡಿಸುತ್ತಾರಲ್ಲ. ಆಗ ಅದನ್ನು ರಕ್ಷಿಸುವವರು ಯಾರು? ಗೋ ಸಂತಾನವನ್ನು ನಿರ್ದಯೆಯಿಂದ ದೊಣ್ಣೆಯಿಂದ

ಹೊಡೆಯುತ್ತಾರಲ್ಲ. ಆವಾಗ ಅವರಿಗೆ ಹಾಗೆ ಮಾಡಬೇಡಿ ಎಂದು ತಿಳಿಸಿ ಹೇಳುವವರು ಯಾರು? ಆದರೂ ನಾವು ಒಂದು ರಾಷ್ಟ್ರವಾಗಿರಲು ಇದು ಅಡ್ಡಿ ಬಂದಿಲ್ಲ.

ಕಡೆಗೆ, ಹಿಂದೂಗಳು ಅಹಿಂಸಕರು, ಮುಸಲ್ಮಾನರು ಅಹಿಂಸಕರಲ್ಲ ಎಂದರೆ ಅಹಿಂಸಕನ ಧರ್ಮವೇನು? ಅಹಿಂಸಾವಾದಿಯಾದವನು ಯಾರನ್ನಾದರೂ ಕೊಲ್ಲಬಹುದು ಎಂದೇನು ಬರೆದಿಲ್ಲ. ಅವರ ದಾರಿ ನೇರಾಗಿದೆ. ಒಂದು ಜೀವವನ್ನು ಉಳಿಸಲು ಇನ್ನೊಂದು ಜೀವವನ್ನು ಅಳಿಸಲಾರ. ನಮ್ರವಾಗಿ ಪ್ರಾರ್ಥಿಸಬಲ್ಲ– ಅದೇ ಅವನ ಕರ್ತವ್ಯ, ಪುರುಷಾರ್ಥ.

ಆದರೆ ಪ್ರತಿಯೊಬ್ಬ ಹಿಂದೂವೂ ಅಹಿಂಸಕನೇ? ನಿಜವಾಗಿ ನೋಡಿದರೆ. ಅಹಿಂಸಕರು ಯಾರೂ ಇಲ್ಲ; ನಾವು ಜೀವಹಿಂಸೆ ಮಾಡುತ್ತಲೇ ಇದೇವೆ. ಯಾವ ಬಗೆಯ ಜೀವಹಿಂಸೆಯನ್ನೂ ಮಾಡದಂತೆ ವಿಮೋಚನೆ ಪಡೆಯಲು ನಾವು ಬಯಸುತ್ತೇವೆ ಎಂದು ನಾವು ಅಹಿಂಸವಾದಿಗಳು. ಸಾಧಾರಣವಾಗಿ ಹಿಂದೂಗಳಲ್ಲಿ ಬಹಳ ಜನ ಮಾಂಸಾಹಾರಿಗಳು. ಆದುದರಿಂದ ಅವರು ಒಟ್ಟಿಗೆ ಇರಲಾರರು ಎನ್ನುವುದು ಶುದ್ಧ ಅಸಂಗತ.

ಸ್ವಾರ್ಥಿಗಳೂ ಮೋಸಗಾರರೂ ಆದ ಮತೋಪದೇಶಕರು ಈ ವಿಚಾರ ಗಳನ್ನೆಲ್ಲ ನಮ್ಮ ಮನಸ್ಸಿನಲ್ಲಿ ತುರುಕಿದ್ದಾರೆ. ಇಂಗ್ಲಿಷರು ಅದನ್ನು ಪೂರ್ಣ ಗೊಳಿಸಿದರು. ಅವರಿಗೆ ಇತಿಹಾಸ ಬರೆವ ರೂಢಿಯಿದೆ. ಎಲ್ಲಾ ಜಾತಿಗಳ ರೂಢಿ–ಸಂಪ್ರದಾಯಗಳನ್ನು ಅಧ್ಯಯನ ಮಾಡುವ ಸೋಗು ಹಾಕುತ್ತಾರೆ ಅವರು. ದೇವರು ನಮಗೆ ಮಿತವಾದ ಬುದ್ಧಿಶಕ್ತಿಯನ್ನು ಕೊಟ್ಟಿದಾನೆ. ಅವರು ತಾವೇ ದೇವರು ಎಂದು ಮನಬಂದಂತೆ ಹೊಸ ಪ್ರಯೋಗಗಳನ್ನು ಮಾಡುತ್ತಿದ್ದಾರೆ. ತಮ್ಮ ಸಂಶೋಧನೆಗಳ ಬಗ್ಗೆ ಬಡಾಯಿ ಕೊಚ್ಚಿ, ಅದರ ಮೋಹಜಾಲದಲ್ಲಿ ನಮ್ಮನ್ನು ನೂಕುತ್ತಾರೆ, ಅಜ್ಞಾನ ವಶದಿಂದ ನಾವು ಅವರ ಕಾಲಿಗೆ ಬಿದ್ದು ಅದನ್ನೆಲ್ಲ ನಂಬುತ್ತೇವೆ.

ತಪ್ಪು ತಿಳಿವಳಿಕೆ ಬೇಡ ಎನ್ನುವವರು ಕುರಾನನ್ನೆ ಓವಲಿ. ಅದರಲ್ಲಿ ಹಿಂದೂಗಳಿಗೆ ಸಮ್ಮತವಾಗುವಂಥ ನೂರಾರು ಮಾತು ಸಿಗುತ್ತವೆ. ಭಗವದ್ಗೀತೆ

ಯಲ್ಲಿರುವ ವಾಕ್ಯಗಳಿಗೆ ಮುಸಲ್ಮಾನನೂ ವಿರೋಧ ಮಾಡಲಾರ. ಕುರಾನಿನಲ್ಲಿ ನನಗೆ ಅರ್ಥವಾಗದವು, ಇಷ್ಟವಿಲ್ಲದವು ಕೆಲವು ವಾಕ್ಯಗಳಿವೆ ಅದಕ್ಕಾಗಿ ಮುಸಲ್ಮಾನರನ್ನು ನಾನು ತಿರಸ್ಕರಿಸಲೆ? ಎರಡು ಕೈ ಸೇರಿ ಚಪ್ಪಾಳೆ, ಇಬ್ಬರು ಕಲೆತು ಜಗಳ. ನನಗೆ ಜಗಳ ಬೇಡ ಎಂದರೆ ಮುಸಲ್ಮಾನ ಏನು ಮಾಡಬಲ್ಲ? ಹಾಗೆಯೆ, ಮುಸಲ್ಮಾನ ನನ್ನೊಡನೆ ಜಗಳವಾಡಲು ಸಿದ್ಧನಾಗಿಲ್ಲದಿದ್ದರೆ ನಾನೇನು ಮಾಡಬಲ್ಲೆ? ಗಾಳಿಯನ್ನು ಗುದ್ದಿದರೆ ಮೈ ನೋವು ಅಲ್ಲವೆ? ಪ್ರತಿಯೊಬ್ಬನೂ ತನ್ನ ತನ್ನ ಧರ್ಮದ ತಿರುಳನ್ನು ಅರಿತು ಅದರಂತೆ ನಡೆದರೆ, ಕಪಟಿ ಮತೋಪದೇಶಕರು ಹೇಳಿದಂತೆ ಕೇಳದಿದ್ದರೆ, ಜಗಳಕ್ಕೆ ಅವಕಾಶವೇ ಇರದು.

**ಓದುಗ:** ಆದರೆ ಇಂಗ್ಲಿಷರು ಈ ಎರಡೂ ಜಾತಿಗಳನ್ನು ಒಟ್ಟಾಗಲು ಬಿಟ್ಟಾರೆಯೇ?

**ಸಂಪಾದಕ :** ಈ ಪ್ರಶ್ನೆ ಅಂಜಿಕೆಯ ಲಕ್ಷಣ. ನಮ್ಮ ಸಂಕುಚಿತತನ, ಹೀನತೆ ಇದರಿಂದ ತಿಳಿಯುತ್ತದೆ. ಇಬ್ಬರು ಅಣ್ಣತಮ್ಮಂದಿರು ಅನ್ಯೋನ್ಯವಾಗಿರಲು ಬಯಸಿದರೆ ಮೂರನೆಯವರು ಯಾರು ಅವರನ್ನು ಬೇರೆ ಬೇರೆ ಮಾಡಬಲ್ಲರು? ಇತರರ ದುಷ್ಟ ಸಲಹೆಗಳಿಗೆ ಅವರು ಕಿವಿಗೊಟ್ಟರೆ ಅವರು ಮೂರ್ಖರೆನ್ನಬೇಕು. ಅದೇ ರೀತಿ ಇಂಗ್ಲಿಷರ ಮಾತು ಕೇಳಿ ನಾವು ಹೋಳಾದರೆ – ನಾವು, ಹಿಂದೂಗಳು ಮುಸ್ಲಿಮರು–ನಮ್ಮನ್ನೇ ನಿಂದಿಸಿಕೊಳ್ಳಬೇಕು; ಅವರನ್ನೇಕೆ ಬೈಯಬೇಕು. ಹಸಿಗಡಿಗೆ ಒಂದಕ್ಕಲ್ಲ ಮತ್ತೊಂದಕ್ಕೆ ತಗಲಿ ಒಡೆದು ಹೋಗುತ್ತದೆ. ಯಾವುದಕ್ಕೂ ತಗಲದಂತೆ ಗಡಿಗೆಯನ್ನು ದೂರ ಇಡುವುದಲ್ಲ ಉಪಾಯ; ಒಡೆಯದಂತೆ ಗಡಿಗೆಯನ್ನು ಸುಡುವುದು. ಆದುದರಿಂದ ನಮ್ಮ ಹೃದಯಗಳನ್ನು ಹಾಗೆ ಪಕ್ವಗೊಳಿಸಬೇಕು. ಆಗ ನಮಗೆ ಯಾವ ಭಯವೂ ಇಲ್ಲ. ಹಿಂದೂಗಳು ಇದನ್ನು ಸುಲಭವಾಗಿ ಮಾಡಬಲ್ಲರು. ಅವರ ಸಂಖ್ಯೆ ಹೆಚ್ಚು. ತಾವು ಹೆಚ್ಚು ಸುಶಿಕ್ಷಿತರೆಂಬ ಹೆಮ್ಮೆಯೂ ಅವರಿಗಿದೆ. ಮುಸಲ್ಮಾನರೊಡನೆ ತಾವು ಸ್ನೇಹವಾಗಿದ್ದರೆ, ಅದಕ್ಕೆ ಯಾವ ಆಘಾತ ಬಂದರೂ ತಡೆದುಕೊಳ್ಳಬಲ್ಲ ಶಕ್ತಿ ಅವರಿಗಿದೆ.

ಈಗ ಎರಡೂ ಜಾತಿಗಳಲ್ಲಿ ಪರಸ್ಪರ ಅವಿಶ್ವಾಸವಿದೆ. ಅದರಿಂದ ಮುಸಲ್ಮಾನರು ತಮಗೆ ಕೆಲವು ವಿಶೇಷ ರಿಯಾಯಿತಿ ಬೇಕೆಂದು ಲಾರ್ಡ್ ಮಾರ್ಲೆಯನ್ನು ಕೇಳುತ್ತಿದ್ದಾರೆ. ಇದನ್ನು ಹಿಂದೂಗಳೇಕೆ ವಿರೋಧಿಸಬೇಕು? ಹಿಂದೂಗಳು

ವಿರೋಧಿಸದಿದ್ದರೆ ಇಂಗ್ಲಿಷರು ಅದನ್ನು ಗಮನಿಸಿಯಾರು, ಮುಸಲ್ಮಾನರು ಕ್ರಮೇಣ ಹಿಂದೂಗಳಲ್ಲಿ ವಿಶ್ವಾಸವಿಟ್ಟಾರು; ಕಡೆಗೆ ಸೋದರಭಾವ ಹುಟ್ಟೀತು. ನಮ್ಮ ಜಗಳಗಳನ್ನು ಇಂಗ್ಲಿಷರ ಬಳಿಗೊಯ್ಯಲು ನಮಗೆ ನಾಚಿಕೆಯಾಗಬೇಕು. ವಿರೋಧ ಮಾಡದಿದ್ದರೆ ಹಿಂದೂಗಳಿಗೇನೂ ನಷ್ಟವಿಲ್ಲ ಎಂಬುದು ಎಲ್ಲರಿಗೂ ತಿಳಿಯು ವಂತಿದೆ. ಇನ್ನೊಬ್ಬನಿಗೆ ತನ್ನಲ್ಲಿ ವಿಶ್ವಾಸ ಹುಟ್ಟುವಂತೆ ಮಾಡಿದವರಿಗೆ ಯಾರಿಗೂ ಎಂದಿಗೂ ಎಳ್ಳಷ್ಟೂ ನಷ್ಟವಿಲ್ಲ.

ಹಿಂದೂಗಳು ಮುಸಲ್ಮಾನರು ಎಂದಿಗೂ ಜಗಳವಾಡರು ಎನ್ನುತ್ತಿಲ್ಲ ನಾನು. ಒಟ್ಟಿಗಿರುವ ಅಣ್ಣತಮ್ಮಂದಿರೂ ಸಹ ಜಗಳವಾಡುತ್ತಾರೆ. ಒಮ್ಮೊಮ್ಮೆ ತಲೆಯೊಡೆದು ಹೋಗುವುದೂ ಉಂಟು. ಹೀಗೆ ಆಗಬೇಕಾದುದಿಲ್ಲ. ಆದರೆ ಎಲ್ಲರಿಗೂ ಒಂದೇ ರೀತಿ ಮತಿಯಿಲ್ಲ. ಸಿಟ್ಟು ಬಂದಾಗ ಮನುಷ್ಯ ಎಷ್ಟೋ ಮೂರ್ಖತನ ಮಾಡುತ್ತಾನೆ. ಅದನ್ನು ನಾವು ಸೈರಿಸಬೇಕು. ಒಂದು ವೇಳೆ ಜಗಳವಾಡಿದರೂ, ಅದಕ್ಕಾಗಿ ವಕೀಲರನ್ನಿಟ್ಟು ಇಂಗ್ಲಿಷರ ಕೋರ್ಟುಗಳಿಗೆ ಹೋಗಬಾರದು. ಇಬ್ಬರು ಜಗಳ ವಾಡಿದರು; ಇಬ್ಬರ ತಲೆಯೂ ಒಡೆಯಿತು ಅಥವಾ ಒಬ್ಬನದೇ. ಅವರ ನಡುವೆ ಮೂರನೆಯವನೇನು ನ್ಯಾಯದಾನ ಮಾಡುವುದು? ಹೊಡೆದಾಡಿದವರು ಗಾಯಗೊಂಡರು. ಇದರಲ್ಲಿ ನ್ಯಾಯದ್ದೇನು ಮಾತು ಬಂತು?

■

## ಅಧ್ಯಾಯ – 11

# ವಕೀಲರು

**ಓದುಗ :** ಇಬ್ಬರು ಜಗಳವಾಡಿದಾಗ ಕೋರ್ಟಿಗೆ ಹೋಗಬಾರದು ಎನ್ನುತ್ತೀರಿ, ಆಶ್ಚರ್ಯಕರವಾಗಿದೆ ಈ ಮಾತು!

**ಸಂಪಾದಕ :** ಆಶ್ಚರ್ಯ ಎನ್ನಿ, ಮತ್ತೇನಾದರೂ ಹೇಳಿ, ಸತ್ಯ ಅದು. ಈ ಸಂದರ್ಭದಲ್ಲಿ ನನಗೆ ವಕೀಲರ, ವೈದ್ಯರ ನೆನಪು ಆಗುತ್ತದೆ. ವಕೀಲರು ಹಿಂದೂಸ್ಥಾನವನ್ನು ಗುಲಾಮಗಿರಿಗೆ ನೂಕಿದ್ದಾರೆ, ಹಿಂದೂ–ಮುಸಲ್ಮಾನರ ಜಗಳ ವನ್ನು ಹೆಚ್ಚಿಸಿದಾರೆ, ಇಂಗ್ಲಿಷರ ರಾಜ್ಯವನ್ನು ಗಟ್ಟಿಮಾಡಿದಾರೆ ಎಂದು ನನ್ನ ನಿಶ್ಚಿತ ಅಭಿಪ್ರಾಯ.

**ಓದುಗ :** ಹೀಗೆ ನಿಂದಿಸುವುದು ಸುಲಭ; ಅದನ್ನು ಪ್ರಮಾಣಿಸುವುದು ಕಷ್ಟ. ವಕೀಲರಲ್ಲದಿದ್ದರೆ ನಮಗೆ ಸ್ವಾತಂತ್ರ್ಯದ ದಾರಿ ತೋರಿದವರು ಯಾರು? ಬಡವರನ್ನು ಯಾರು ಕಾಪಾಡುತ್ತಿದ್ದರು? ನ್ಯಾಯದಾನ ಮಾಡಿಸುತ್ತಿದ್ದವರು ಯಾರು? ಸ್ವರ್ಗೀಯ ಮನಮೋಹನಘೋಷರು ಉಚಿತವಾಗಿ ವಾದಿಸಿ ಎಷ್ಟು ಬಡವರನ್ನು ಕಾಪಾಡಲಿಲ್ಲ? ನೀವು ಇಷ್ಟು ಹೊಗಳಿದಿರಲ್ಲ ಕಾಂಗ್ರೆಸ್ಸನ್ನು, ಅದರ ಆಧಾರ ವಕೀಲರೇ. ಇಂಥ ಪ್ರತಿಷ್ಠಿತ ಜನರ ವರ್ಗವನ್ನು ನಿಂದಿಸುವುದು ಅನ್ಯಾಯ. ನಿಮ್ಮ ಕೈಯಲ್ಲಿ ಪತ್ರಿಕೆಯಿದೆ ಎಂದು ದುರುಪಯೋಗ ಮಾಡುತ್ತಿದ್ದೀರಿ.

**ಸಂಪಾದಕ:** ಒಂದು ಕಾಲದಲ್ಲಿ ನಾನೂ ನಿಮ್ಮ ಹಾಗೆಯೇ ಯೋಚನೆ ಮಾಡುತ್ತಿದ್ದೆ. ವಕೀಲರು ಎಂದೂ ಒಳ್ಳೆಯ ಕೆಲಸವನ್ನೇ ಮಾಡಲಿಲ್ಲ ಎಂದು ನಾನು ಹೇಳುತ್ತಿಲ್ಲ. ಶ್ರೀಯುತ ಘೋಷರನ್ನು ಗೌರವಿಸುತ್ತೇನೆ. ಅವರು ಬಡವರಿಗೆ ಸಹಾಯ ಮಾಡಿದುದು ನಿಜ. ಕಾಂಗ್ರೆಸ್ಸಿನ ಚಳವಳಿಯ ಶ್ರೇಯಸ್ಸು ಸ್ವಲ್ಪಮಟ್ಟಿಗೆ

ವಕೀಲರಿಗೆ ಸಲ್ಲುತ್ತದೆಂಬುದನ್ನೂ ಒಪ್ಪಬಹುದು. ವಕೀಲರೂ ಮನುಷ್ಯರೇ ಅಲ್ಲವೆ; ಪ್ರತಿಯೊಬ್ಬ ಮನುಷ್ಯನಲ್ಲಿಯೂ ಏನಾದರೊಂದು ಒಳ್ಳೆಯದು ಇದ್ದೇ ಇರುತ್ತದೆ. ವಕೀಲರು ಒಳ್ಳೆಯದು ಮಾಡಿದಾರೆ ಎಂಬ ದೃಷ್ಟಾಂತಗಳೆಲ್ಲ ಅವರು ಮನುಷ್ಯರು ಎಂದು ಮಾಡಿದವು? ವಕೀಲರಾದುದರಿಂದ ಮಾಡಿದುದಲ್ಲ. ನಾನು ಹೇಳುವುದಿಷ್ಟು; ಈ ವೃತ್ತಿ ದುರ್ನೀತಿಯನ್ನು ಕಲಿಸುತ್ತದೆ. ಇದರಲ್ಲಿ ಪ್ರಲೋಭನ ಹೆಚ್ಚು. ಅದಕ್ಕೆ ಬಲಿಯಾಗದವರು ಬಹಳ ಕಡಿಮೆ.

ಒಂದು ಕಡೆ ಹಿಂದೂಗಳೂ ಮುಸಲ್ಮಾನರೂ ಜಗಳವಾಡಿದರು, ಸಾಧಾರಣ ಮನುಷ್ಯ ಆದುದನ್ನೆಲ್ಲ ಮರೆತುಬಿಡಿ ಎನ್ನುತ್ತಾನೆ. ಎರಡೂ ಕಡೆ ಅಲ್ಪಸ್ವಲ್ಪ ತಪ್ಪಿದ್ದೇ ಇರುತ್ತದೆ. ಮುಂದೆ ಜಗಳವಾಡಬೇಡಿ ಎಂದು ಬುದ್ಧಿ ಹೇಳುತ್ತಾನೆ. ಆದರೆ ಅವರು ವಕೀಲರ ಬಳಿಗೆ ಹೋಗುತ್ತಾರೆ. ಅವರು ಮಾಡುವುದೇನು? ತಮ್ಮ ಕಕ್ಷಿಗಾರರ ಪರವಾಗಿ ವಾದ. ಆ ಕಕ್ಷಿಗಾರನಿಗೇ ಗೊತ್ತಿಲ್ಲದ ಸಂಗತಿಗಳನ್ನೂ ಹುಡುಕಿ ತೆಗೆಯುವುದು. ಹಾಗೆ ಮಾಡದಿದ್ದರೆ ಅಂಥವರು ತಮ್ಮ ವೃತ್ತಿಗೇ ಕಳಂಕ ಆದುದರಿಂದ ಸಾಧಾರಣವಾಗಿ ವಕೀಲರು ಜಗಳನ್ನು ನಂದಿಸುವುದಿಲ್ಲ. ಮತ್ತಷ್ಟು ಉರಿಸುತ್ತಾರೆ.

ಇನ್ನೊಂದು–ಪರರ ದುಃಖ ನಿವಾರಣೆಗಾಗಿ ಯಾರೂ ವಕೀಲಿ ಮಾಡುವುದಿಲ್ಲ; ಹಣ ಗಳಿಸಲು ಮಾಡುತ್ತಾರೆ. ಐಶ್ವರ್ಯ ಸಂಪಾದನೆಗೆ ಇದೊಂದು ದಾರಿಯಾಗಿದೆ. ಜಗಳ ಹೆಚ್ಚಾದರೆ ಅವರಿಗೆ ಲಾಭ ಹೆಚ್ಚು. ಜಗಳ ಹೆಚ್ಚಾದರೆ ವಕೀಲರಿಗೆ ಸಂತೋಷ; ನಾನಿದನ್ನು ಸ್ವಂತವಾಗಿ ಬಲ್ಲೆ. ಚಿಕ್ಕ ಪುಟ್ಟ ವಕೀಲರು, ಇಲ್ಲದ ಕಡೆ ಜಗಳ ಹುಟ್ಟಿಸುತ್ತಾರೆ. ಅವರ ದಲ್ಲಾಳಿಗಳು (ಫೂಟ್ ಲಾಯರ್) ಜಿಗಣೆಯಂತೆ ಬಡವರ ರಕ್ತವನ್ನು ಹೀರುತ್ತಾರೆ. ಆ ಕಸಬೇ ಜಗಳ ಕಚ್ಚಾಟಗಳಿಗೆ ಪ್ರೋತ್ಸಾಹ ಕೊಡುವಂಥದು. ವಕೀಲರಿಗೆ ಕೆಲಸ ಹೆಚ್ಚು ಇರುವುದಿಲ್ಲ. ಭೋಗ–ವಿಲಾಸಗಳನ್ನು ಬಯಸುವ ಮೈಗಳ್ಳ ಜನ ಇಂಥ ವೃತ್ತಿಗಳನ್ನು ಹುಡುಕುತ್ತಾರೆ. ಇದು ಸತ್ಯ, ಉಳಿದೆಲ್ಲ ವಾದವೂ ಬರೀ ನೆಪ. ವಕೀಲಿ ಕಸಬು ಗೌರವಯುತ ವಾದುದೆಂದು ಕಂಡುಹಿಡಿದವರು ವಕೀಲರೇ. ಆತ್ಮಪ್ರಶಂಸೆ ಮಾಡಿಕೊಳ್ಳುವ ಹಾಗೆಯೆ

ಕಾನೂನನ್ನೂ ರಚಿಸುತ್ತಾರೆ. ಎಷ್ಟು ಸಂಭಾವನೆ ತೆಗೆದುಕೊಳ್ಳ ಬೇಕೆಂಬುದನ್ನು ತಾವೇ ನಿರ್ಧರಿಸುತ್ತಾರೆ. ಬಹಳ ಠೀವಿಯಿಂದ ಇರುತ್ತಾರೆ. ಅದನ್ನು ಕಂಡು ಬಡಬಗ್ಗರು ಇವರನ್ನು ದೇವತೆಗಳೆಂದೇ ತಿಳಿಯುತ್ತಾರೆ.

ಸಾಮಾನ್ಯ ಕೂಲಿಗಾರನಿಗಿಂತ ಇವರಿಗೇಕೆ ಹೆಚ್ಚು ಸಂಭಾವನೆ ಬೇಕು? ಕೂಲಿಗಾರರಿಗಿಂತ ಹೆಚ್ಚು ಅವಶ್ಯಕತೆಗಳು ಇವರಿಗೇಕೆ? ಕೂಲಿಗಾರರಿಗಿಂತ ಹೆಚ್ಚಾಗಿ ಇವರು ಮಾಡಿದ ದೇಶಸೇವೆಯೇನು? ಸೇವೆ ಮಾಡಿದವರಿಗೆ ಹೆಚ್ಚು ಹಣ ಪಡೆವ ಅಧಿಕಾರವೆ? ಹಣಕ್ಕಾಗಿ ಕೆಲಸ ಮಾಡಿದರೆ ಅದನ್ನು ಸೇವೆಯೆನ್ನಬಹುದೆ?

ಹಿಂದೂ-ಮುಸ್ಲಿಂ ಜಗಳಗಳೆಲ್ಲ ಎಷ್ಟೋ ಸಲ ವಕೀಲರ ಕೈವಾಡದಿಂದಲೇ ಆಗಿವೆಯೆಂಬುದನ್ನು ಈ ಜಗಳಗಳ ಪರಿಚಯವಿದ್ದವರು ಬಲ್ಲರು. ಇದರಿಂದ ಕೆಲವು ಮನೆತನಗಳೇ ಹಾಳಾಗಿವೆ. ಅಣ್ಣತಮ್ಮಂದಿರು ಬದ್ಧ ವೈರಿಗಳಾಗಿದಾರೆ, ಎಷ್ಟೋ ಸಂಸ್ಥಾನಗಳು ಇವರ ಕೈಗೆ ಸಿಕ್ಕಿ ಸಾಲದಲ್ಲಿ ಮುಳುಗಿಹೋಗಿವೆ. ಅನೇಕರಿಗೆ ಸರ್ವನಾಶವಾಗಿದೆ. ಇಂಥ ಉದಾಹರಣೆಗಳನ್ನು ಅನೇಕ ಹೇಳಬಹುದು.

ಎಲ್ಲಕ್ಕಿಂತ ಹೆಚ್ಚಾಗಿ ಅವರಿಂದ ದೇಶಕ್ಕಾದ ನಷ್ಟ ಇಂಗ್ಲಿಷರ ಮುಷ್ಟಿಯನ್ನು ಬಲಪಡಿಸಿದುದು. ಕೋರ್ಟುಗಳಿಲ್ಲದಿದ್ದರೆ ಇಂಗ್ಲಿಷರು ತಮ್ಮ ಆಡಳಿತ ನಡೆಯಿಸ ಲಾಗುತ್ತಿರಲಿಲ್ಲ. ಕೋರ್ಟುಗಳು ಜನರ ಹಿತಕ್ಕಾಗಿ ಏರ್ಪಾಡಾಗಿವೆ ಎಂದು ತಿಳಿಯುವುದು ತಪ್ಪು. ತಮ್ಮ ಸತ್ತೆಯನ್ನು ಸ್ಥಿರಗೊಳಿಸಬೇಕೆನ್ನುವವರು ಕೋರ್ಟುಗಳ ಮೂಲಕ ಹಾಗೆ ಮಾಡುತ್ತಾರೆ. ಜನರು ತಮ್ಮ ಜಗಳಗಳನ್ನು ತಾವೇ ಪರಿಹರಿಸಿ ಕೊಂಡರೆ ಅವರ ಮೇಲೆ ಮೂರನೆಯವರದೇನು ಅಧಿಕಾರ? ಕಾದಾಡಿಯೋ ತಮ್ಮ ಅಪ್ತೇಷ್ಟರಿಂದ ತೀರ್ಪು ಮಾಡಿಸಿಕೊಂಡೋ ಜನರು ತಮ್ಮ ತಮ್ಮೊಳಗೆಯೆ ಜಗಳಗಳನ್ನು ಪರಿಹರಿಸುತ್ತಿದ್ದಾಗ ಇಷ್ಟು ನಪುಂಸಕರಾಗಿರಲಿಲ್ಲ. ಈ ಕೋರ್ಟು ಕಚೇರಿಗಳಿಗೆ ಹೋಗಲು ಮೊದಲಿಟ್ಟ ಮೇಲೆ ಜನರು ಹೆಚ್ಚು ಅಂಜುಗುಳಿಗಳೂ ನಪುಂಸಕರೂ ಆದರು. ಹೊಡೆದಾಡಿ ಸಾಯುವುದು ಅಸಭ್ಯತೆಯೆ, ಸಂದೇಹವಿಲ್ಲ. ಆದರೆ ನಮ್ಮ ಜಗಳವನ್ನು ನೀವು ತೀರಿಸಿಕೊಡಿ ಎಂದು ಮೂರನೆಯುವರನ್ನು ಕೇಳುವುದು ಮಾತ್ರ ಅಸಭ್ಯತೆಯಲ್ಲವೇ?

ಮೂರನೆಯವರು ಮಾಡಿದ ತೀರ್ಮಾನ ಯಾವಾಗಲೂ ಸರಿಯೆ ಎಂದು ಹೇಳಬಲ್ಲವರು ಯಾರು? ಯಾರದು ಸತ್ಯವೋ ಆ ಕಕ್ಷಿಗಳಿಗೆ ಮಾತ್ರವೇ ಗೊತ್ತು. ನಾವು ಭೋಳೇ ಜನ. ಅಜ್ಞಾನಿಗಳು, ನಮ್ಮ ಹಣ ತೆಗೆದುಕೊಂಡ ಹೊಸಬ ನಮಗೆ ನ್ಯಾಯದಾನಮಾಡಬಲ್ಲ ಎಂದು ತಿಳಿಯುತ್ತೇವೆ.

ಮುಖ್ಯವಾಗಿ ನೆನಪಿಡಬೇಕಾದುದು ಇಷ್ಟು; ವಕೀಲರಿಲ್ಲದಿದ್ದರೆ ಈ ಕೋರ್ಟುಗಳೇ ಸ್ಥಾಪಿತವಾಗುತ್ತಿರಲಿಲ್ಲ; ಕೋರ್ಟುಗಳಿಲ್ಲದೆ ಇಂಗ್ಲಿಷರು ರಾಜ್ಯ ನಡೆಸಲಾಗುತ್ತಿರಲಿಲ್ಲ. ಬರೀ ಇಂಗ್ಲಿಷ್ ನ್ಯಾಯಾಧೀಶರು, ಇಂಗ್ಲಿಷ್ ವಕೀಲರು, ಇಂಗ್ಲಿಷ್ ಪೊಲೀಸರೇ ಇದ್ದಿದ್ದರೆ. ಇಂಗ್ಲೀಷರನ್ನು ಮಾತ್ರ ಅವರು ಆಳಬಹು ದಾಗಿತ್ತು. ಭಾರತೀಯ ನ್ಯಾಯಾಧೀಶರು ಭಾರತೀಯ ವಕೀಲರು ಇಲ್ಲದೆ ಇಂಗ್ಲಿಷರ ಕೆಲಸ ನಡೆಯುತ್ತಿರಲಿಲ್ಲ. ಮೊಟ್ಟಮೊದಲು ವಕೀಲರು ಹೇಗೆ ಹುಟ್ಟಿಕೊಂಡರೋ, ಅವರ ಮೇಲೆ ಹೇಗೆ ಕೃಪಾಕಟಾಕ್ಷ ಬಿತ್ತೋ ನೀವು ತಿಳಿದುಕೊಳ್ಳಬೇಕು. ಆಗ ಈ ಕಸುಬಿನ ಬಗ್ಗೆ ನನಗಿರುವಷ್ಟೇ ತಿರಸ್ಕಾರ ನಿಮಗೂ ಹುಟ್ಟುತ್ತದೆ. ಈ ವಕೀಲರು ತಮ್ಮ ಕಸಬನ್ನು ಬಿಡಲಿ, ಈ ಕಸಬು ಹೀನ ಎನ್ನಲಿ; ಇಂಗ್ಲಿಷರ ರಾಜ್ಯ ಒಂದು ದಿನದಲ್ಲಿ ಕರಗಿ ಹೋಗುತ್ತದೆ. ಹಿಂದೂಸ್ಥಾನಿಗಳು ಜಗಳಗಂಟರು, ಕೋರ್ಟು ಎಂದರೆ ಇವರಿಗೆ ಮೀನಿಗೆ ನೀರಿದ್ದ ಹಾಗೆ ಎಂದು ನಮಗೆ ಅಪನಿಂದೆ ಬರಲು ವಕೀಲರು ಕಾರಣ.

ವಕೀಲರನ್ನು ಕುರಿತು ಹೇಳಿದುದೆಲ್ಲಾ ನ್ಯಾಯಾಧೀಶರಿಗೂ ಅನ್ವಯಿಸುತ್ತದೆ. ಅವರೂ ಇವರೂ ದಾಯಾದಿಗಳು. ಅವರಿಂದ ಇವರಿಗೆ ಬಲ, ಇವರಿಂದ ಅವರಿಗೆ ಬಲ.



## ಅಧ್ಯಾಯ – ೧೨

# ವೈದ್ಯರು

**ಓದುಗ** : ವಕೀಲರ ವಿಷಯ ಈಗ ಅರ್ಥವಾಯಿತು. ಅವರಿಂದ ಆದ ಒಳ್ಳೆಯದು ಪ್ರಾಸಂಗಿಕ. ಅವರ ವೃತ್ತಿ ಕೆಟ್ಟುದು. ನೀವು ವಕೀಲರ ಜೊತೆಗೆ ವೈದ್ಯರನ್ನು ಸೇರಿಸುತ್ತೀರಿಲ್ಲ–ಅದು ಹೇಗೆ?

**ಸಂಪಾದಕ** : ನಾನು ನಿಮಗೆ ಹೇಳುತ್ತಿರುವ ಅಭಿಪ್ರಾಯ ಕೇವಲ ನನ್ನದೇ ಅಲ್ಲ. ಪಶ್ಚಿಮದ ಲೇಖಕರು ವಕೀಲರನ್ನು, ವೈದ್ಯರನ್ನು ಕುರಿತು ಇನ್ನೂ ಕಟುವಾಗಿ ಟೀಕಿಸಿದ್ದಾರೆ. ಒಬ್ಬ ಲೇಖಕ ಈ ಆಧುನಿಕ ಪದ್ಧತಿಯನ್ನೆಲ್ಲ ಒಂದು ವಿಷವೃಕ್ಷಕ್ಕೆ ಹೋಲಿಸಿದ್ದಾನೆ. ವಕೀಲಿ, ವೈದ್ಯ ಇತ್ಯಾದಿ ಪರೋಪಜೀವಿ ವೃತ್ತಿಗಳೇ ಆ ವಿಷವೃಕ್ಷದ ರೆಂಬೆಗಳು. ಈ ವೃಕ್ಷದ ಬುಡದ ಮೇಲೆ ಧರ್ಮದ ಕೊಡಲಿ ನಿಂತಿದೆ. ಅನೀತಿಯ ಪರೋಪಜೀವಿ ಕಸಬುಗಳೇ ಅದರ ಬೇರುಗಳು. ಆದುದರಿಂದ, ಈ ಅಭಿಪ್ರಾಯಗಳೆಲ್ಲ ನನ್ನ ಕಲ್ಪನೆಯೆ ಅಲ್ಲ, ಅನೇಕರ ಅನುಭವದ ಸಾರ.

ಒಂದು ಕಾಲದಲ್ಲಿ ನನಗೆ ವೈದ್ಯರನ್ನು ಕಂಡರೆ ಬಹಳ ಪ್ರೀತಿಯಿತ್ತು. ಲೋಕಸೇವಾರ್ಥ ನಾನೂ ಒಬ್ಬ ವೈದ್ಯನಾಗಬೇಕೆಂಬ ಆಸೆಯೂ ಇತ್ತು. ಈಗ ಆ ಮೋಹವಿಲ್ಲ. ವೈದ್ಯರಿಗೆ ನಮ್ಮಲ್ಲಿ ಏಕೆ ಶ್ರೇಷ್ಠಸ್ಥಾನವನ್ನು ಕೊಟ್ಟಿರಲಿಲ್ಲವೆಂಬುದು ಈಗ ನನಗೆ ಅರ್ಥವಾಗಿದೆ. ಇಂಗ್ಲಿಷರು ನಮ್ಮನ್ನು ಅಧೀನದಲ್ಲಿಡಲು ವೈದ್ಯವೃತ್ತಿಯುನ್ನು ಚೆನ್ನಾಗಿ ಉಪಯೋಗಿಸಿ ಕೊಂಡಿದ್ದಾರೆ. ಮೊಗಲ ಬಾದಷಹನನ್ನು ಪುಸಲಾಯಿಸಿದವನು ಒಬ್ಬ ಇಂಗ್ಲಿಷ್ ವೈದ್ಯ. ಏಷ್ಯಾದಲ್ಲಿ ಅನೇಕ ಕಡೆ ವೈದ್ಯರು ಹೀಗೆ ರಾಜಕೀಯ ಸಾಧಿಸಿದ್ದಾರೆ.

ವೈದ್ಯರು ನಮಗೆ ಕೀಲೇ ತಪ್ಪಿಸಿದ್ದಾರೆ. ಈ ವಿದ್ವಾಂಸ ವೈದ್ಯರಿಗಿಂತ ನಮ್ಮ ನಾಟಿ ವೈದ್ಯರೇ ಲೇಸು ಎಂದು ಆಗಾಗ ನನಗನಿಸಿದೆ. ಸ್ವಲ್ಪ ಆಲೋಚಿಸೋಣ; ವೈದ್ಯನ ಕೆಲಸ ದೇಹ ರಕ್ಷಣೆ ಅಥವಾ ಅದೂ ಅಲ್ಲ. ದೇಹಕ್ಕೆ ಬರಬಹುದಾದ ರೋಗಗಳ ನಿವಾರಣೆ ಅವರ ಕೆಲಸ. ಈ ರೋಗಗಳು ಬರುತ್ತವೆ ಹೇಗೆ? ನಮ್ಮ ಅಸಡ್ಡೆಯಿಂದ ಅಥವಾ ಅತ್ಯುಪಯೋಗದಿಂದ. ನಾನು ಹೊಟ್ಟೆ ಬಿರಿಯೆ ತಿಂದೆ, ಅಜೀರ್ಣವಾಯಿತು. ವೈದ್ಯನ ಬಳಿಗೆ ಹೋದೆ, ಔಷಧಿ ಕುಡಿದೆ, ಗುಣವಾಯಿತು ಮತ್ತೆ ಹೊಟ್ಟೆ ಬಿರಿಯೆ ತಿಂದೆ, ಮತ್ತೆ ವೈದ್ಯನ ಗುಳಿಗೆ ತಿಂದೆ. ಮೊದಲನೆ ಸಲವೇ ಆ ಗುಳಿಗೆಯನ್ನು ತಿನ್ನದಿದ್ದರೆ, ನನ್ನ ತಪ್ಪಿಗೆ ಸರಿಯಾದ ಶಿಕ್ಷೆಯನ್ನು ಅನುಭವಿಸುತ್ತಿದ್ದೆ. ಮತ್ತೊಮ್ಮೆ ಹೊಟ್ಟೆಗೆ ಕೂರುತ್ತಿರಲಿಲ್ಲ. ವೈದ್ಯ ನಡುವೆ ಬಂದು ನಾನು ಮತ್ತೆ ತಿಂಡಿಪೋತನಾಗಲು ದಾರಿಮಾಡಿದ. ನನ್ನ ದೇಹಕ್ಕೇನೋ ಅದರಿಂದ ಹಗುರವಾಯಿತು. ನನ್ನ ಮನಸು ದುರ್ಬಲವಾಯಿತು. ಹೀಗೆ ಬಹಳ ದಿನ ಔಷಧ ಸೇವಿಸಿದರೆ ಕ್ರಮೇಣ ನನ್ನ ಮನೋದಾರ್ಢ್ಯವೇ ನಷ್ಟವಾದೀತು.

ನಾನು ಭೋಗಾಸಕ್ತನಾದೆ, ರೋಗ ಬಂತು, ವೈದ್ಯ ಗುಣ ಮಾಡಿದ; ನಾನು ಮತ್ತೆ ಭೋಗಕ್ಕೆ ತಿರುಗಿದೆ. ವೈದ್ಯ ಕೈಹಾಕದಿದ್ದರೆ ಪ್ರಕೃತಿ ತನ್ನ ಕೆಲಸವನ್ನು ಮಾಡುತ್ತಿತ್ತು; ನಾನು ನಿಗ್ರಹವನ್ನು ಕಲಿಯುತ್ತಿದ್ದೆ, ಭೋಗ ಚಾಪಲ್ಯವನ್ನು ಬಿಡುತ್ತಿದ್ದೆ. ಸುಖಿಯಾಗುತ್ತಿದ್ದೆ.

ಆಸ್ಪತ್ರೆಗಳು ಪಾಪದ ತವರು. ಅದರಿಂದ ಜನರು ತಮ್ಮ ಶರೀರದ ಬಗ್ಗೆ ಅಶ್ರದ್ಧೆ ತೋರುತ್ತಾರೆ. ಅನೀತಿ ಹೆಚ್ಚುತ್ತದೆ. ಇಂಗ್ಲಿಷ್ ವೈದ್ಯರಂತೂ ಎಲ್ಲರಿಗಿಂತ ಕೀಳು, ಮನುಷ್ಯ ಶರೀರದ ರಕ್ಷಣೆಯ ಭ್ರಾಂತಿಗಾಗಿ ಪ್ರತಿವರ್ಷವೂ ಸಾವಿರಾರು ಪ್ರಾಣಿಗಳನ್ನು ಕೊಲ್ಲುತ್ತಾರೆ. ಜೀವಂತ ಪ್ರಾಣಿಗಳ ಮೇಲೆ ನಾನಾ ಪ್ರಯೋಗ ನಡೆಸುತ್ತಾರೆ. ಯಾವ ಧರ್ಮವೂ ಇದನ್ನು ಒಪ್ಪದು. ನಮ್ಮ ದೇಹಗಳಿಗಾಗಿ ಇಷ್ಟು ಜೀವ ಹಿಂಸೆ ಮಾಡುವುದು ಅನಗತ್ಯವೆಂದು ಎಲ್ಲರೂ ಹೇಳುತ್ತಾರೆ.

ವೈದ್ಯರು ನಮ್ಮ ಧರ್ಮವನ್ನು ನಾಶಮಾಡುತ್ತಾರೆ. ಅವರ ಔಷಧಗಳಲ್ಲಿ ಹೆಚ್ಚಾಗಿ ಪ್ರಾಣಿಗಳ ಕೊಬ್ಬೋ, ಮದ್ಯವೋ ಇರುತ್ತದೆ. ಇವೆರಡೂ ಹಿಂದೂಗಳಿಗೂ ಮುಸ್ಲಿಮರಿಗೂ ನಿಷಿದ್ಧ ವಸ್ತುಗಳು. ನಾಗರಿಕತೆಯ ವೇಷ ಹಾಕಿ, ಧಾರ್ಮಿಕ ನಿಷೇಧಗಳನ್ನು ಕುರುಡು ನಂಬಿಕೆಗಳೆಂದು ನಾವು ಮನಬಂದಂತೆ ನಡೆಯಬಹುದು. ವೈದ್ಯರು ನಮಗೆ ಸ್ವಚ್ಛಂದವಾಗಿರಲು ಪ್ರೋತ್ಸಾಹ ನೀಡುವುದಂತೂ ನಿಜ, ಅದರಿಂದ ನಾವು ಸಂಯಮಹೀನರೂ ನಪುಂಸಕರೂ ಆಗಿದ್ದೇವೆ. ಇಂಥ ಸ್ಥಿತಿಯಲ್ಲಿ ನಾವೇನು ದೇಶ ಸೇವೆ ಮಾಡಬಲ್ಲೆವು? ಇಂಗ್ಲಿಷ್ ವೈದ್ಯವನ್ನು ಕಲಿಯುವುದೆಂದರೆ ನಮ್ಮ ಗುಲಾಮಗಿರಿಯನ್ನು ದೃಢಪಡಿಸಿದ ಹಾಗೆ.

ನಾವು ವೈದ್ಯರಾಗುವುದೇಕೆ? ಪರೋಪಕಾರಕ್ಕಂತೂ ಅಲ್ಲ. ಹಣ ಗಳಿಸಲು, ಪ್ರತಿಷ್ಠೆ ಸಂಪಾದಿಸಲು. ಈ ವೃತ್ತಿಯಲ್ಲಿ ನಿಜವಾದ ಲೋಕಸೇವೆಯೇನೂ ಇಲ್ಲವೆಂಬುದನ್ನೂ ಇದು ಮನುಷ್ಯರಿಗ ನಷ್ಟದಾಯಕವೆಂಬುದನ್ನೂ ತಿಳಿಸಿದ್ದೇನೆ. ವೈದ್ಯರು ತಮ್ಮ ಜ್ಞಾನದ ಆಡಂಬರ ತೋರಿಸಿ ಜನರಿಂದ ಹೆಚ್ಚು ಹೆಚ್ಚು ಹಣ ಸೆಳೆಯುತ್ತಾರೆ. ಅವರ ಔಷಧಕ್ಕೆ ಬೆಲೆ ಕಾಸಿನದಾದರೆ ಅವರು ರೂಪಾಯಿ ತೆಗೆದುಕೊಳ್ಳುತ್ತಾರೆ. ಜನರು ಅವರನ್ನು ನಂಬಿ, ರೋಗ ಗುಣವಾದೀತೆಂಬ ಆಸೆಯಿಂದ ಮೋಸಹೋಗುತ್ತಾರೆ. ಸೋಗು ಹಾಕುವ ಈ ವೈದ್ಯರಿಗಿಂತ ನಮಗೆ ಚೆನ್ನಾಗಿ ಪರಿಚಯವಿರುವ ಅಳಲೇಕಾಯಿ ಪಂಡಿತರೇ ಲೇಸಲ್ಲವೆ?



# ಅಧ್ಯಾಯ – ೧೩

## ನಿಜವಾದ ಸಭ್ಯತೆ ಎಂಥದು?

**ಓದುಗ :** ರೈಲಿನ, ವೈದ್ಯರ, ವಕೀಲರ ಟೀಕೆಯಾಯಿತು. ಸರಿ, ಯಂತ್ರಗಳೇ ಬೇಡ ಎನ್ನುತ್ತೀರಿ ನೀವು. ಹಾಗಾದರೆ ಸಭ್ಯತೆಯೆಂದರೇನು?

**ಸಂಪಾದಕ :** ಅದಕ್ಕೆ ಉತ್ತರ ಕಷ್ಟವಲ್ಲ. ನಾನು ಭಾರತೀಯ ಸಭ್ಯತೆಗಿಂತ ಹೆಚ್ಚಿನದು ಯಾವುದೂ ಇಲ್ಲವೆಂದು ನಂಬಿದ್ದೇನೆ. ನಮ್ಮ ಪೂರ್ವಜರು ಬಿತ್ತಿದ ಬೀಜಕ್ಕೆ ಸಾಟಿಯಾದುದು ಯಾವುದೂ ಇಲ್ಲ, ರೋಂ ಮಣ್ಣುಗೂಡಿತು, ಗ್ರೀಸೂ ಅಷ್ಟೇ. ಈಜಿಪ್ಟಿನ ಫರೋಹಾ ಸಾಮ್ರಾಜ್ಯ ನಾಶವಾಯಿತು; ಜಪಾನ್ ಪಶ್ಚಿಮದ ವೇಷ ತೊಟ್ಟಿತು; ಚೀನಾದ ಬಗ್ಗೆ ಹೇಳುವಂತಿಲ್ಲ. ಆದರೆ ಹಿಂದೂಸ್ಥಾನ ಮಾತ್ರ ಏಳುತ್ತ ಬೀಳುತ್ತ ಇನ್ನೂ ಭದ್ರವಾಗಿಯೆ ಇದೆ, ಬುಡದಲ್ಲಿ. ರೋಂ ಗ್ರೀಸುಗಳ ವೈಭವ ಈಗಿಲ್ಲ. ಆದರೂ ಯೂರೋಪಿನ ಜನರು ರೋಂ ಗ್ರೀಸುಗಳ ಪಾಠವನ್ನೆ ಕಲಿಯುತ್ತ ಅವರು, ಮಾಡಿದ ತಪ್ಪುಗಳನ್ನು ನಾವು ಬಿಡೋಣ ಎಂದು ಆಶಿಸುತ್ತಾರೆ. ಹೀಗಿದೆ ಅವರ ದಯನೀಯ ಸ್ಥಿತಿ. ಇಂಥದರಲ್ಲಿಯೂ ಹಿಂದೂಸ್ಥಾನ ಮಾತ್ರ ಅಚಲವಾಗಿದೆ. ಇದೇ ಅದರ ಶೋಭೆ. ಇಲ್ಲಿನ ಜನರು ಅನಾಗರಿಕರು. ಅಜ್ಞಾನಿಗಳು, ಸೋಮಾರಿಗಳು; ಏನು ಬದಲಾವಣೆ ಮಾಡಬೇಕೆಂದರೂ ಅವರನ್ನು ತಿದ್ದುವುದು ಕಷ್ಟ ಎಂದು ಹಿಂದೂಸ್ಥಾನದ ಮೇಲೆ ಆರೋಪವಿದೆ. ಆದರೆ ಇದು ನಮ್ಮ ದೋಷವಲ್ಲ, ಗುಣ. ಅನುಭವದ ಒರೆಗಲ್ಲಿಗೆ ತಿಕ್ಕಿ ಸರಿಯೆಂದು ಕಂಡು ಕೊಂಡದನ್ನು ಬದಲಿಸೋಣವೆ? ಹಿಂದೂಸ್ಥಾನಕ್ಕೆ ಬುದ್ಧಿ ಹೇಳುವವರು ಬಹಳ ಜನ. ಆದರೂ ಹಿಂದೂಸ್ಥಾನ ಅವಿಚಲಿತವಾಗಿ ಇದೆ. ಇದೇ ಅದರ ಸೊಬಗು; ಇದೇ ನಮ್ಮ ಆಶಾಕಿರಣ.

ಮನುಷ್ಯನಿಗೆ ಕರ್ತವ್ಯ ತೋರಿಸುವ ಆಚಾರ ವ್ಯವಹಾರವೇ ಸಭ್ಯತೆ. ಕರ್ತವ್ಯ ಪಾಲನೆ ನೀತಿಪಾಲನೆಯೆ. ಅದಕ್ಕೇ ಇನ್ನೊಂದು ಹೆಸರು ಇದು.

ನೀತಿಪಾಲನೆ ಯೆಂದರೆ ಇಂದ್ರಿಯನಿಗ್ರಹ, ರಾಗದ್ವೇಷಗಳ ಸಂಯಮ. ಹಾಗೆ ನಡೆದರೆ ನಮ್ಮನ್ನು ನಾವು ಅರಿತುಕೊಳ್ಳುತ್ತೇವೆ. ಸಭ್ಯತೆ ಎಂದರೆ ಒಳ್ಳೆಯ ನಡತೆ.

ಈ ವ್ಯಾಖ್ಯೆ ಸರಿಯೆಂದರೆ, ಅನೇಕ ಲೇಖಕರು ಹೇಳಿರುವಂತೆ ಹಿಂದೂಸ್ಥಾನ ಯಾರಿಂದಲೂ ಏನೂ ಕಲಿಯಬೇಕಾಗಿಲ್ಲ. ಅದು ಸರಿ. ಮನುಷ್ಯನ ಮನಸ್ಸು ಅತಿ ಚಂಚಲವೆಂಬುದು ನಮಗೆ ಗೊತ್ತು. ಕೊಟ್ಟಷ್ಟೂ ಬೇಕು ಎನ್ನುತ್ತದೆ, ಸಾಲದು ಎನ್ನುತ್ತದೆ. ಇಂದ್ರಿಯಗಳನ್ನು ಎಷ್ಟು ಸಡಿಲಬಿಟ್ಟರೆ ಅಷ್ಟು ಭೋಗಲಾಲಸೆ ಹೆಚ್ಚುತ್ತದೆ. ಆದುದರಿಂದಲೇ ನಮ್ಮ ಪೂರ್ವಜರು ಅದಕ್ಕೆ ಮಿತಿ ಮೇರೆ ಕಲ್ಪಿಸಿದ್ದರು. ಸುಖ ಎಂಬುದು ನಮ್ಮ ಮನಸ್ಸಿನದೇ ಒಂದು ಸೃಷ್ಟಿ ಎಂಬುದನ್ನು ಅವರು ಅರಿತಿದ್ದರು. ಸಿರಿವಂತನಾದುದರಿಂದ ಒಬ್ಬನು ಸುಖಿಯಲ್ಲ. ಬಡವನಾದುದರಿಂದ ಒಬ್ಬನು ದುಃಖಿಯಲ್ಲ. ಎಷ್ಟೋ ಸಂದರ್ಭಗಳಲ್ಲಿ ಸಿರಿವಂತನೇ ದುಃಖಿ. ಬಡವನೇ ಸುಖಿ ಆಗಿರುವುದು ಕಾಣಬರುತ್ತದೆ. ಜನಸ್ತೋಮ ಯಾವಾಗಲೂ ಬಡವರಾಗಿಯೇ ಇರುತ್ತಾರೆ. ಇದನ್ನೆಲ್ಲ ನೋಡಿ ತಿಳಿದೇ ನಮ್ಮ ಹಿರಿಯರು ಭೋಗವಿಲಾಸಕ್ಕೆ ಬಲಿಯಾಗಬೇಡಿ ಎಂದು ನಮಗೆ ಹೇಳಿದ್ದಾರೆ. ಸಾವಿರಾರು ವರ್ಷಗಳಿಂದ ಅದೇ ನೇಗಿಲನ್ನೇ ನಾವು ಬಳಸುತ್ತಿದ್ದೇವೆ. ಸಾವಿರಾರು ವರ್ಷಗಳ ಹಿಂದೆ ಇದ್ದಂಥ ಗುಡಿಸಲೇ ಈಗಲೂ ಇದೆ. ನಮ್ಮ ದೇಶೀಶಿಕ್ಷಣ ಮೊದಲಿನ ಹಾಗೆಯೇ ಇದೆ. ನಮ್ಮಲ್ಲಿ ಈ ಸರ್ವನಾಶಕ ಸ್ಪರ್ಧೆಯಿರಲಿಲ್ಲ. ಪ್ರತಿಯೊಬ್ಬನೂ ತನ್ನ ತನ್ನ ಕಸಬನ್ನು ನಡೆಸಿಕೊಂಡು ಹೋಗುತ್ತಿದ್ದ, ನಿಯಮಿತವಾದ ಪ್ರತಿಫಲ ಪಡೆಯುತ್ತಿದ್ದ. ಯಂತ್ರಗಳನ್ನು ಮಾಡುವುದು ನಮಗೆ ಗೊತ್ತಿರಲಿಲ್ಲವೆಂದಲ್ಲ. ಆದರೆ ಯಂತ್ರದ ಮಾಯೆಗೆ ಸಿಲುಕಿದರೆ ಮನುಷ್ಯ ಅದರ ದಾಸನಾಗಿ ಅನೀತಿಯ ಪಾಲಾಗುತ್ತಾನೆ ಎಂಬುದನ್ನು ನಮ್ಮ ಹಿರಿಯರು ಕಂಡಿದ್ದರು. ಆದುದರಿಂದ ದೀರ್ಘ ಚಿಂತನೆ ಮಾಡಿ, ನಮ್ಮ ಕೈಕಾಲುಗಳಿಂದ ಎಷ್ಟು ಸಾಧ್ಯವೋ ಏನು ಸಾಧ್ಯವೋ ಅದನ್ನೇ ಮಾಡಬೇಕು ಎಂದು ನಿರ್ಣಯಿಸಿದರು. ನಮ್ಮ ಕೈಕಾಲುಗಳನ್ನು ಸರಿಯಾಗಿ ಉಪಯೊಗಿಸುವುದೇ ಆಯುರಾರೋಗ್ಯ ಸುಖಸಂತೋಷಗಳಿಗೆ ದಾರಿ ಎಂದು ಅವರು ಅರಿತಿದ್ದರು. ದೊಡ್ಡ ದೊಡ್ಡ ಪಟ್ಟಣಗಳು ಬರೀ ಜಂಜಾಟ, ವ್ಯರ್ಥ ಮಾಯಾಜಾಲ; ಅದರಲ್ಲಿನ ಜನಕ್ಕೆ ಸುಖವಿಲ್ಲ ಎಂದು ಅವರು ತೀರ್ಮಾನಿಸಿದರು. ಆ

ಮಾಯಾಬಜಾರುಗಳಲ್ಲಿ ದುರಾಚಾರ, ದುರ್ನೀತಿ, ಸೂಳೆಗಾರಿಕೆ, ಜೂಜು ಹೆಚ್ಚಾಗಿ ಬೆಳೆದು, ಕಳ್ಳಕಾಕರಿಗೆ ದರೋಡೆಗಾರರ ತಂಡಗಳಿಗೆ ಅವು ನೆಲೆವೀಡಾಗುತ್ತವೆ. ಬಡವರನ್ನು ಭಾಗ್ಯವಂತರು ಸುಲಿಯುತ್ತಾರೆ ಎಂಬುದನ್ನೂ ಅರಿತುಕೊಂಡಿದ್ದರು. ಅದರಿಂದ ಚಿಕ್ಕ ಚಿಕ್ಕ ಹಳ್ಳಿಗಳೇ ಅವರಿಗೆ ತೃಪ್ತಿದಾಯಕ ವಾಗಿದ್ದವು. ರಾಜರು, ರಾಜದಂಡ, ಅವರ ಖಡ್ಗ ಎಲ್ಲವೂ ನೈತಿಕ ಬಲಕ್ಕೆ ಸಮನಲ್ಲ ಎಂಬುದು ಅವರಿಗೆ ತಿಳಿದಿತ್ತು. ಹೀಗಾಗಿ ರಾಜಧಿರಾಜರಿಗಿಂತ ಋಷಿಮುನಿಗಳು ಸಾಧುಶರಣರು ಹೆಚ್ಚು ಎಂದು ಅವರ ಅಭಿಪ್ರಾಯವಾಗಿತ್ತು. ಇಂಥ ರಚನೆಯುಳ್ಳ ರಾಷ್ಟ್ರ ಯಾರಿಂದ ಏನು ಕಲಿಯಬೇಕು? ಇತರರಿಗೆ ಕಲಿಸುವ ರಾಷ್ಟ್ರ ಇದು. ಈ ರಾಷ್ಟ್ರದಲ್ಲಿಯೂ ವೈದ್ಯರು, ವಕೀಲರು, ಕೋರ್ಟು ಕಚೇರಿ ಎಲ್ಲವೂ ಇತ್ತು. ಎಲ್ಲಕ್ಕೂ ಒಂದು ಮಿತಿಯಿತ್ತು. ಈ ವೃತ್ತಿ ಯಾವುದೂ ಉಳಿದುದಕ್ಕಿಂತ ಶ್ರೇಷ್ಠ ಎಂದು ಯಾರೂ ತಿಳಿದಿರಲಿಲ್ಲ. ಅಲ್ಲದೆ ಆ ವಕೀಲರು, ವೈದ್ಯರು ಜನರನ್ನು ಕೊಳ್ಳೆ ಹೊಡೆಯುತ್ತಿರಲಿಲ್ಲ; ಜನತೆಯ ಆಶ್ರಿತರು ಅವರು, ಆಶ್ರಯದಾತರಲ್ಲ ಎಂದು ಎಲ್ಲರೂ ತಿಳಿದಿದ್ದರು. ನ್ಯಾಯ ತೃಪ್ತಿಕರವಾಗಿತ್ತು. ಸಾಧಾರಣವಾಗಿ ಯಾರೂ ನ್ಯಾಯಾಲಕ್ಕೆ ಹೋಗುತ್ತಿರಲಿಲ್ಲ. ಕೋರ್ಟುಗಳಿಗೆ ಜನರನ್ನು ಸೆಳೆಯಲು ದಳ್ಳಾಳಿಗಳು ಯಾರೂ ಇರಲಿಲ್ಲ. ಅಂಥದೇನಾದರೂ ಇದ್ದರೆ, ರಾಜಧಾನಿಗಳಲ್ಲಿ ಮಾತ್ರ, ಸಾಮಾನ್ಯ ಜನತೆ ತಮ್ಮ ಬೇಸಾಯ ಮಾಡುತ್ತ ಸ್ವತಂತ್ರವಾಗಿದ್ದರು. ಅವರದು ನಿಜವಾಗಿಯೂ ಸ್ವರಾಜ್ಯ.

ಈಗಲೂ ಈ ದುಷ್ಟ ಆಧುನಿಕ ನಾಗರಿಕತೆ ಎಲ್ಲಿ ವ್ಯಾಪಿಸಿಲ್ಲವೋ ಅಲ್ಲಿ ಹಿಂದೂಸ್ಥಾನ ಮೊದಲಿನಂತೆಯೇ ಇದೆ. ಆ ಪ್ರದೇಶಗಳ ಜನತೆ ನಿಮ್ಮ ಹೊರ ಆಡಂಬರವನ್ನು ನೋಡಿ ನಗುತ್ತಾರೆ. ಇಂಗ್ಲಿಷರು ಅವರನ್ನು ಅಳುತ್ತಿಲ್ಲ. ನೀವೂ ಎಂದಿಗೂ ಅವರನ್ನು ಆಳಲಾರಿರಿ. ನಾನು ಯಾರ ಮಾತನ್ನಾಡುತ್ತಿದ್ದೇವೋ ಅವರು ನಮ್ಮನ್ನು ಅರಿಯರು, ನಾವು ಅವರನ್ನು ಅರಿಯೆವು. ದೇಶ ಪ್ರೇಮವಿರುವ ನಿಮ್ಮಂಥವರು ನಮ್ಮ ದೇಶದಲ್ಲಿ ರೈಲಿಗೆ ಇನ್ನೂ ಎಟುಕದ ಪ್ರದೇಶಗಳಿಗೆ ಹೋಗಿ ಆರು ತಿಂಗಳು ವಾಸಮಾಡಿ ಎಂದು ನಾನು ಸಲಹೆ ಕೊಡುತ್ತೇನೆ. ಆಮೇಲೆ ನೀವು ನಿಜವಾದ ದೇಶಭಕ್ತಿ ಕಲಿತೀರಿ; ಆಗ ಸ್ವರಾಜ್ಯದ ಮಾತನ್ನು ಆಡಿ.

ಯಾವುದನ್ನು ನಾನು ನಿಜವಾದ ಸಭ್ಯತೆ ಎನ್ನುತ್ತೇನೋ ತಿಳಿಯಿತಲ್ಲ. ಈ ಪರಿಸ್ಥಿತಿಯನ್ನೆಲ್ಲ ಬದಲಿಸಬೇಕೆನ್ನುವವರು ಹಿಂದೂಸ್ಥಾನದ ಶತ್ರುಗಳು.

ಓದುಗ : ನೀವು ಹೇಳಿದ ಹಾಗೆ ಹಿಂದೂಸ್ಥಾನ ಇದ್ದಿದ್ದರೆ ಸರಿ. ಆದರೆ ಈ ನೂರಾರು ಬಾಲವಿಧವೆಯರು, ಎರಡು ವರ್ಷಕ್ಕೆ ಮದುವೆಯಾದ ಮಕ್ಕಳು, ಹನ್ನೆರಡು ವರ್ಷಕ್ಕೆ ಮಕ್ಕಳನ್ನು ಹೆತ್ತ ಬಾಲಮಾತೃ ಗೃಹಿಣಿಯರು, ಬಹುಪತಿಗಳುಳ್ಳ ಸತಿಯರು, ನಿಯೋಗ ಪದ್ಧತಿ, ಧರ್ಮ ಹೆಸರಿನಲ್ಲಿ ಕುರಿ ಮೇಕೆಗಳ ಪ್ರಾಣಿ ಬಲಿ, ಇದೆಲ್ಲವೂ ಇದೆಯಲ್ಲ ಹಿಂದೂಸ್ಥಾನದಲ್ಲಿ? ಇವು ನೀವು ವರ್ಣಿಸಿದ ಸಭ್ಯತೆಯ ಲಕ್ಷಣಗಳೇನು?

**ಸಂಪಾದಕ:** ನೀವು ತಪ್ಪು ಮಾಡುತ್ತಿದ್ದೀರಿ. ನೀವು ತೋರಿಸಿದ ದೋಷಗಳೆಲ್ಲವೂ ದೋಷಗಳೇ. ಇವು ಪುರಾತನ ಸಭ್ಯತೆ ಎಂದು ಯಾರೂ ತಿಳಿದಿಲ್ಲ. ಆ ಸಭ್ಯತೆಗೂ ಮೀರಿ ಈ ದೋಷ ನಿಂತಿದೆ. ಇದನ್ನು ನಿವಾರಿಸಲು ಸದಾ ಪ್ರಯತ್ನ ನಡೆದಿದೆ. ಮುಂದೆಯೂ ನಡೆಯುತ್ತದೆ. ಈ ದೋಷಗಳನ್ನು ತೊಳೆಯಲು ನಮ್ಮೊಳಗೆ ಈಗ ಆಗಿರುವ ಹೊಸ ಜಾಗೃತಿಯನ್ನು ಉಪಯೋಗಿಸಬಹುದು. ಆದರೆ ಆಧುನಿಕ ನಾಗರಿಕತೆಯ ಲಕ್ಷಣಗಳೆಂದು ನಾನು ತೋರಿಸಿದುದನ್ನೆಲ್ಲ ಹಾಗೆಂದು ಅದರ ಭಕ್ತರೇ ಒಪ್ಪಿದ್ದಾರೆ. ಭಾರತೀಯ ಸಭ್ಯತೆಯನ್ನು ಅದರ ಭಕ್ತರು ಹೀಗೆ ವರ್ಣಿಸಿದ್ದಾರೆ. ಯಾವ ಸಭ್ಯತೆಯಿಂದಲೂ ಯಾವ ದೇಶದಲ್ಲಿಯೂ ಸಮಸ್ತರೂ ಪೂರ್ಣತೆ ಪಡೆದಿಲ್ಲ. ಆದರೆ, ಭಾರತೀಯ ಸಭ್ಯತೆಯ ಪ್ರವೃತ್ತಿ ನೈತಿಕ ವಿಕಾಸಕ್ಕೆ, ಪಶ್ಚಿಮದ ನಾಗರಿಕತೆಯ ಪ್ರವೃತ್ತಿ ಅನೈತಿಕತೆಗೆ, ಪ್ರೋತ್ಸಾಹ. ಪಶ್ಚಿಮದ ನಾಗರಿಕತೆ ನಾಸ್ತಿಕವಾದುದು, ಭಾರತೀಯ ಸಭ್ಯತೆ ಆಸ್ತಿಕವಾದುದು, ಇದನ್ನು ತಿಳಿದು ಹಿಂದೂಸ್ಥಾನದ ಹಿತೈಷಿಗಳು ಪ್ರಾಚೀನ ಭಾರತೀಯ ಸಭ್ಯತೆ ಯನ್ನು, ಮಗು ತಾಯಿಯ ಎದೆಯನ್ನು ಅವಚಿಕೊಳ್ಳುವಂತೆ, ಅಷ್ಟು ಶ್ರದ್ಧೆಯಿಂದ ಅಪ್ಪಿಕೊಳ್ಳಬೇಕು.

■

## ಅಧ್ಯಾಯ – ೧೪

# ಹಿಂದೂಸ್ಥಾನ ಹೇಗೆ ಸ್ವತಂತ್ರವಾದೀತು?

**ಓದುಗ** : ಸಭ್ಯತೆಯನ್ನು ಕುರಿತ ನಿಮ್ಮ ವಿಚಾರ ತಿಳಿಯಿತು. ಅದನ್ನು ಆಲೋಚಿಸುತ್ತೇನೆ. ಒಂದೇ ಸಲಕ್ಕೆ ಅವೆಲ್ಲವನ್ನೂ ಒಪ್ಪಲಾರೆ. ಈ ವಿಚಾರಕ್ಕೆ ಅನುಸಾರವಾಗಿ ಹಿಂದೂಸ್ಥಾನ ಹೇಗೆ ಸ್ವತಂತ್ರವಾದೀತು?

**ಸಂಪಾದಕ** : ಒಂದೇ ಸಲಕ್ಕೆ ಎಲ್ಲರೂ ನನ್ನ ವಿಚಾರಗಳನ್ನು ಒಪ್ಪುತ್ತಾರೆಂಬ ನಿರೀಕ್ಷೆಯೂ ನನಗಿಲ್ಲ. ನಿಮ್ಮಂಥ ಓದುಗರಿಗೆ ನನ್ನ ವಿಚಾರಗಳನ್ನು ತಿಳಿಸುವುದು ನನ್ನ ಕೆಲಸ, ಉಳಿದುದು ಕಾಲಾಧೀನ. ಹಿಂದೂಸ್ಥಾನವನ್ನು ಹೇಗೆ ಸ್ವತಂತ್ರ ಮಾಡಬೇಕೆಂಬುದನ್ನು ಅಪ್ರತ್ಯಕ್ಷವಾಗಿ ತಿಳಿದಿದ್ದೇವೆ. ಈಗ ಪ್ರತ್ಯಕ್ಷವಾಗಿ ತಿಳಿದುಕೊಳ್ಳೋಣ. ರೋಗದ ಕಾರಣಗಳನ್ನು ದೂರ ಮಾಡಿದರೆ ರೋಗವೆ ದೂರವಾಗುತ್ತದೆ; ಎಲ್ಲರೂ ಇದನ್ನು ಬಲ್ಲರು. ಹಿಂದೂಸ್ಥಾನದ ಗುಲಾಮಗಿರಿಯ ಕಾರಣಗಳನ್ನು ದೂರ ಮಾಡಿದರೆ ಹಿಂದೂಸ್ಥಾನ ಸ್ವತಂತ್ರವಾಗುತ್ತದೆ.

**ಓದುಗ** : ನೀವು ಹೇಳುವಂತೆ ಹಿಂದೂಸ್ಥಾನದ ಸಭ್ಯತೆ ಸರ್ವೋತ್ತಮವಾದರೆ ಈ ದೇಶ ಪರತಂತ್ರವೇಕಾಯಿತು?

**ಸಂಪಾದಕ** : ಈ ಸಭ್ಯತೆ ನಿಸ್ಸಂದೇಹವಾಗಿ ಸರ್ವೋತ್ತಮ. ಎಲ್ಲಾ ಸಭ್ಯತೆಗಳಿಗೂ ಒಂದೊಂದು ಪರೀಕ್ಷಾಕಾಲ ಬರುತ್ತದೆ. ಯಾವ ಸಭ್ಯತೆ ಸ್ಥಿರವಾದುದೋ ಅದು ಆ ಗಂಡವನ್ನು ದಾಟುತ್ತದೆ. ಹಿಂದೂಸ್ಥಾನದ ಸಂತಾನದಲ್ಲಿ ದೃಢತೆಯಿರಲಿಲ್ಲ. ಅದರಿಂದ ಈ ಸಭ್ಯತೆ ಸಂಕಟಕ್ಕೆ ಈಡಾಯಿತು. ಆ ಗಂಡದಿಂದ ಪಾರಾಗುವ ಅದರ ಸಾಮರ್ಥ್ಯವೇ ಅವರ ಬಲದ ದ್ಯೋತಕ. ಇನ್ನೂ ಇಡೀ ಹಿಂದೂಸ್ಥಾನದಲ್ಲಿ ಇದು ಹರಡಿಲ್ಲ. ವಿಲಾಯಿತಿ ಶಿಕ್ಷಣ ಪಡೆದು ಪಶ್ಚಿಮದ ನಾಗರಿಕತೆಯ ಸೆಳೆತಕ್ಕೆ ಗುರಿಯಾದವರು ಗುಲಾಮಗಿರಿಗೆ ಸಿಕ್ಕಿದ್ದಾರೆ. ನಮ್ಮ ಅಳತೆಗೋಲಿನಿಂದ ನಾವು ಲೋಕವನ್ನು ಅಳೆಯುತ್ತೇವೆ. ನಾವು ಗುಲಾಮರಾದರೆ ಲೋಕವೆಲ್ಲ

ಗುಲಾಮರಾದಂತೆ. ನಾವು ದುರ್ದೆಶೆಯಲ್ಲಿದ್ದೇವೆ. ಇಡೀ ಭಾರತ ಕಂಗಾಲಾಗಿದೆ ಎನ್ನುತ್ತೇವೆ. ನಿಜ ಹಾಗಿಲ್ಲ. ಆದರೂ ನಮ್ಮ ಗುಲಾಮಗಿರಿ ದೇಶದ ಗುಲಾಮಗಿರಿ ಎಂದು ಭಾವಿಸುವುದು ಒಳಿತು. ಏಕೆಂದರೆ ನಮ್ಮ ಬಿಡುಗಡೆಯಾದರೆ ಭಾರತದ ಬಿಡುಗಡೆಯಾದಂತೆ. ಈ ವಿಚಾರದಲ್ಲಿಯೆ ಸ್ವರಾಜ್ಯದ ವ್ಯಾಖ್ಯೆ ಅಡಕವಾಗಿದೆ. ನಮ್ಮನ್ನು ನಾವು ಆಳಲು ಕಲಿತರೆ ಅದೇ ಸ್ವರಾಜ್ಯ. ಆದುದರಿಂದ ಸ್ವರಾಜ್ಯ ನಮ್ಮ ಕೈಯಲ್ಲಿಯೇ ಇದೆ.

ಈ ಸ್ವರಾಜ್ಯ ಬರೀ ಕನಸಲ್ಲ. ಸುಮ್ಮನೆ ನಿಷ್ಕ್ರಿಯವಾಗಿ ಕೂಡುವುದೂ ಅಲ್ಲ ಒಂದು ಸಲ ನಮಗೆ ಸ್ವರಾಜ್ಯ ಅನುಭವವಾದರೆ ನಮ್ಮ ಜೀವನ ಪರ್ಯಂತ ಇತರರನ್ನೂ ಅದೇ ರೀತಿ ಮಾಡುವಂತೆ ಪ್ರೇರಿಸಲು ಯತ್ನಿಸಿಯೇವು. ಇಂಥದು ನಾನು ಚಿತ್ರಿಸುವ ಸ್ವರಾಜ್ಯ ಚಿತ್ರ. ಆದರೆ ಈ ಸ್ವರಾಜ್ಯವನ್ನು ಪ್ರತಿಯೊಬ್ಬನೂ ಅನುಭವಿಸಬೇಕು. ತಾನು ಮುಳುಗುವವನು ಪರರನ್ನು ಉಳಿಸಬಲ್ಲನೆ? ತಾನೆ ಗುಲಾಮನಾದವನು ಪರರನ್ನೇನು ಬಿಡುಗಡೆ ಮಾಡಬಲ್ಲ.

ಇಂಗ್ಲಿಷರನ್ನು ಓಡಿಸುವುದೆ ನಮ್ಮ ಗುರಿಯಾಗಬೇಕಾಗಿಲ್ಲ. ನಿಮಗಿದು ಈಗ ಅರ್ಥವಾಗಿರಬೇಕು. ಇಂಗ್ಲಿಷರು ಭಾರತೀಯರಾದರೆ ನಮ್ಮಲ್ಲಿ ಕೂಡಿಸಿ ಕೊಳ್ಳಬಹುದು. ತಮ್ಮ ನಾಗರಿಕತೆಯನ್ನು ಇಲ್ಲಿ ನಡೆಸಬೇಕು ಎಂದರೆ ಅವರಿಗೆ ಇಲ್ಲಿ ಸ್ಥಳವಿಲ್ಲ. ಇಂಥ ಸ್ಥಿತಿಯನ್ನು ನಿರ್ಮಿಸುವುದು ನಮ್ಮ ಕೈಯಲ್ಲಿದೆ.

**ಓದುಗ :** ಇಂಗ್ಲಿಷರು ಭಾರತೀಯರಾಗುವುದು ಎಂದಿಗೂ ಸಾಧ್ಯವಿಲ್ಲ.

**ಸಂಪಾದಕ :** ಹಾಗೆಂದರೆ ಇಂಗ್ಲಿಷರು ಮನುಷ್ಯರಲ್ಲ ಎಂದ ಹಾಗೆ. ಇಷ್ಟಕ್ಕೂ ಅವರು ಭಾರತೀಯರಾಗುವುದೂ ಬಿಡುವುದು ಬೇರೆ ಮಾತು. ನಾವು ನಮ್ಮ ಮನೆಯನ್ನು ಚೊಕ್ಕಟವಾಗಿಟ್ಟುಕೊಂಡರೆ, ಅದರಲ್ಲಿ ಇರಬಹುದಾದವರು ಇರುತ್ತಾರೆ. ಉಳಿದವರು ಹೋಗುತ್ತಾರೆ. ಇದು ನಮ್ಮ ಅನುಭವದ ಮಾತು.

**ಓದುಗ :** ಇತಿಹಾಸದಲ್ಲಿ ಹೀಗೆ ಎಂದೂ ನಡೆದಿಲ್ಲ.

**ಸಂಪಾದಕ :** ಹಿಂದೂ ನಡೆಯದಿದ್ದುದು ಮುಂದೆ ನಡೆಯುವುದಿಲ್ಲ ಎಂದರೆ ಮನುಷ್ಯನ ಶಕ್ತಿಯಲ್ಲಿ ನಂಬಿಕೆಯಿಲ್ಲವೆಂದಂತೆ. ಏನೇ ಇರಲಿ, ನಮ್ಮ ಬುದ್ಧಿಗೆ ತೋಚಿದುದನ್ನು ನಾವು ಪ್ರಯತ್ನಿಸಿ ನೋಡಬೇಕಾದುದು ನಮ್ಮ ಕರ್ತವ್ಯ. ಎಲ್ಲಾ ದೇಶಗಳ ಸ್ಥಿತಿ ಒಂದೇ ರೀತಿಯಿಲ್ಲ. ಹಿಂದೂಸ್ಥಾನದ

ಸ್ಥಿತಿ ವಿಶಿಷ್ಟ. ಅದರ ಬಲ ಅತುಲ. ಆದುದರಿಂದ ಬೇರೆ ದೇಶಗಳ ಇತಿಹಾಸಕ್ಕೆ ಇದನ್ನು ಹೋಲಿಸಬೇಕಾಗಿಲ್ಲ. ಉಳಿದ ನಾಗರಿಕತೆಗಳೆಲ್ಲ ನಷ್ಟವಾಗಿವೆ. ಹಿಂದುಸ್ಥಾನದ ಸಭ್ಯತೆ ಎಲ್ಲಾ ಗಂಡಾಂತರ ಗಳನ್ನು ಮೀರಿ ನಿಂತಿದೆ ಎಂಬುದನ್ನು ಆಗಲೇ ಹೇಳಿದ್ದೇನೆ.

**ಓದುಗ** : ಈ ಮಾತು ನನಗೆ ಸರಿ ಕಾಣುವುದಿಲ್ಲ. ನಾವು ಶಸ್ತ್ರ ಬಲದಿಂದಲೇ ಇಂಗ್ಲಿಷರನ್ನು ಓಡಿಸಬೇಕೆಂಬುದರಲ್ಲಿ ಸಂದೇಹವಿಲ್ಲ. ಅವರು ಈ ದೇಶ ದಲ್ಲಿರುವವರೆಗೆ ನಮಗೆ ಹಾಯಿ ಇಲ್ಲ. 'ಪರಾಧೀನನಿಗೆ ಕನಸಿನಲ್ಲಿಯೂ ಸುಖವಿಲ್ಲ' ಎಂದು ಕವಿ ಹಾಡಿದ್ದಾನೆ. ಇಂಗ್ಲಿಷರು ಇಲ್ಲಿರುವುದರಿಂದ ನಾವು ದಿನೇ ದಿನೇ ದುರ್ಬಲರಾಗುತ್ತಿದ್ದೇವೆ. ನಮ್ಮ ತೇಜಸ್ಸೆಲ್ಲ ನಷ್ಟವಾಗಿದೆ. ಭಯಭೀತರಂತೆ ಕಾಣುತ್ತಿದ್ದೇವೆ. ಇಂಗ್ಲಿಷರು ಇಲ್ಲಿರುವುದು ನಮಗೆ ಪೀಡೆಯಿದ್ದ ಹಾಗೆ. ಹೇಗಾದರೂ ಮಾಡಿ ಅವರನ್ನು ಓಡಿಸಬೇಕು.

**ಸಂಪಾದಕ** : ಉದ್ರೇಕದಲ್ಲಿ ಇಷ್ಟು ಹೊತ್ತು ಹೇಳಿದ ಮಾತನ್ನೆಲ್ಲ ಮರೆತಿರಿ. ನಾವೇ ಇಂಗ್ಲಿಷ್‌ರನ್ನು ತಂದವರು. ನಾವೇ ಅವರನ್ನು ಇಟ್ಟುಕೊಂಡಿದ್ದೇವೆ. ಅವರ ನಾಗರಿಕತೆಯನ್ನು ನಾವು ಕಲಿತುದರಿಂದಲೇ ಅವರು ಇಲ್ಲಿ ನೆಲೆಸಿದಾರೆ ಎಂಬುದನ್ನು ಏಕೆ ಮರೆಯುತ್ತೀರಿ? ಅವರನ್ನಲ್ಲಿ ನೀವು ದ್ವೇಷಿಸಬೇಕಾದುದು, ಅವರ ನಾಗರಿಕತೆಯನ್ನು. ಇರಲಿ, ಒಂದು ವೇಳೆ ಇಂಗ್ಲಿಷರನ್ನು ಕಾದಾಡಿಯೇ ಕಳಿಸಬೇಕಾಯಿತು ಎನ್ನಿ, ಹೇಗೆ ಮಾಡುತ್ತೀರಿ?

**ಓದುಗ** : ಇಟಲಿ ಮಾಡಲಿಲ್ಲವೆ? ಹಾಗೆ, ಮ್ಯಾಜಿನಿ, ಗ್ಯಾರಿಬಾಲ್ಡಿಗಳಿಗೆ ಯಾವುದು ಸಾಧ್ಯವಾಯಿತೋ ಅದು ನಮಗೂ ಸಾಧ್ಯ. ಅವರು ಮಹಾವೀರರಲ್ಲ ಎನ್ನುತ್ತೀರಾ?



## ಅಧ್ಯಾಯ – ೧೫

## ಇಟಲಿ–ಹಿಂದೂಸ್ಥಾನ

**ಸಂಪಾದಕ :** ಒಳ್ಳೆಯ ಉದಾಹರಣೆ ಕೊಟ್ಟಿರಿ. ಇಟಲಿಯದು. ಮ್ಯಾಜಿನಿ ಮಹಾತ್ಮ, ಗ್ಯಾರಿಬಾಲ್ಡಿ ಮಹಾಶೂರ. ಇಬ್ಬರೂ ಪೂಜನೀಯರು. ಅವರ ಜೀವನದಿಂದ ನಾವು ಎಷ್ಟೋ ಕಲಿಯಬಹುದು. ಆದರೆ ಇಟಲಿಯ ಪರಿಸ್ಥಿತಿ ಬೇರೆ. ಹಿಂದೂಸ್ಥಾನದ ಪರಿಸ್ಥಿತಿ ಬೇರೆ. ಮೊದಲು, ಮ್ಯಾಜಿನಿ ಗ್ಯಾರಿಬಾಲ್ಡಿಯಲ್ಲಿದ್ದ ಭೇದ ಗಮನೀಯ. ಮ್ಯಾಜಿನಿ ಬಯಸಿದುದು ಬೇರೆ. ಇಟಲಿಯಲ್ಲಿ ಅದು ಇನ್ನೂ ಕೈಗೂಡಿಲ್ಲ. ಮಾನವನ ಕರ್ತವ್ಯಗಳ ಬಗ್ಗೆ ಬರೆಯುತ್ತ, ಪ್ರತಿಯೊಬ್ಬನೂ ತನ್ನನ್ನು ತಾನು ಆಳಲು ಕಲಿಯಬೇಕು ಎಂದ. ಅದು ಇಟಲಿಯಲ್ಲಿ ಆಗಿಲ್ಲ. ಮ್ಯಾಜಿನಿಯ ಈ ವಿಚಾರ ಗ್ಯಾರಿಬಾಲ್ಡಿಗೆ ಇಷ್ಟವಿರಲಿಲ್ಲ. ಗ್ಯಾರಿಬಾಲ್ಡಿ ಪ್ರತಿಯೊಬ್ಬ ಇಟಲಿಯವನಿಗೂ ಆಯುಧಗಳನ್ನು ಕೊಟ್ಟ. ಅವರೂ ಆಯುಧಗ್ರಹಣ ಮಾಡಿದರು.

ಇಟಲಿ–ಆಸ್ಟ್ರಿಯಾಗಳಲ್ಲಿ ಒಂದೇ ನಾಗರಿಕತೆ. ಅದರಲ್ಲಿ ಅವರು ಅಣ್ಣ ತಮ್ಮಂದಿರು. ಮುಯ್ಯಿಗೆ ಮುಯ್ಯಿ ಅವರದು. ಆಸ್ಟ್ರಿಯಾದ ಮುಷ್ಟಿಯಿಂದ ಇಟಲಿಯನ್ನು ಹೇಗಾದರೂ ಬಿಡಿಸಬೇಕು; ಇದೇ ಗ್ಯಾರಿಬಾಲ್ಡಿಯ ಆಸೆ. ಅದಕ್ಕಾಗಿ ಅವನು ಮಂತ್ರಿ ಕಾವೂರನ ಮೂಲಕ ಮಾಡಿದ ಒಳಸಂಚುಗಳು ಇಟಲಿಯ ಇತಿಹಾಸಕ್ಕೇ ಕಳಂಕ. ಅದರಿಂದ ಆದುದೇನು? ಈಗ ಇಟಲಿಯವರೇ ಇಟಲಿ ಯನ್ನು ಆಳುತ್ತಾರೆ; ಆದುದರಿಂದ ಇಟಲಿಯ ಜನ ಸುಖವಾಗಿದ್ದಾರೆ ಎಂದು ನೀವು ತಿಳಿದಿದ್ದರೆ ನಿಮ್ಮ ಕಣ್ಣಿಗೆ ಕತ್ತಲೆ ಕವಿದಿದೆ. ಇಟಲಿ ಸ್ವತಂತ್ರವಾಗಲಿಲ್ಲ ಎಂಬುದ್ನು ಮ್ಯಾಜಿನಿ ಚೆನ್ನಾಗಿ ವಿವರಿಸಿದ್ದಾನೆ. ಇಟಲಿ ಎಂದರೆ ವಿಕ್ಟರ್ ಇಮಾನ್ಯುಯಲ್ ಮಾಡಿದ ಅರ್ಥ ಬೇರೆ. ಮ್ಯಾಜಿನಿಯ ಅರ್ಥವೇ ಬೇರೆ. ಇಮಾನ್ಯುಯಲ್, ಕಾವೂರ್,

ಗ್ಯಾರಿಬಾಲ್ಡಿಗಳ ಪ್ರಕಾರ ಇಟಲಿಯೆಂದರೆ ಇಟಲಿಯ ರಾಜ (ಇಮ್ಯಾನ್ಯುಯಲ್), ಅವನ ಪರಿವಾರ. ಮ್ಯಾಜಿನಿಗೆ ಇಟಲಿಯೆಂದರೆ ಇಟಲಿಯ ಪ್ರಜೆ, ಇಟಲಿಯ ರೈತರು, ಇಮ್ಯಾನ್ಯುಯಲ್ ಮುಂತಾದವರು ಪ್ರಜೆಯ ಸೇವಕರು. ಮ್ಯಾಜಿನಿಯ ಆ ಇಟಲಿ ಇನ್ನೂ ದಾಸ್ಯದಲ್ಲಿಯೆ ತೊಳಲುತ್ತಿದೆ. ರಾಷ್ಟ್ರೀಯ ಯುದ್ಧ ಎಂಬುದು ಇಬ್ಬರು ಪ್ರತಿಸ್ಪರ್ಧಿ ರಾಜರ ನಡುವೆ ನಡೆದ ಚದುರಂಗದಾಟ. ಇಟಲಿಯ ಪ್ರಜೆ ಅದರಲ್ಲಿ ಪೇದೆಗಳು. ಈಗಲೂ ಅಲ್ಲಿನ ಕೂಲಿಗಾರರು ದುಃಖದಲ್ಲಿಯೇ ಇದ್ದಾರೆ. ಅವರ ಕೂಗನ್ನು ಕೇಳುವವರಿಲ್ಲ. ಅದರಿಂದ ಅವರು ಕೊಲೆ, ದೊಂಬಿ, ವಿದ್ರೋಹ ಮಾಡುತ್ತಲೇ ಇರುತ್ತಾರೆ. ಯಾವಾಗಲೂ ಅದು ಇದ್ದದ್ದೇ, ಆಸ್ಟ್ರಿಯಾದ ಸೇನೆ ಹೊರಟುಹೋದ ಮೇಲೆ ಇಟಲಿಗೆ ಆದ ಲಾಭವೇನು? ಹೆಸರಿಗೆ ಮಾತ್ರ ಲಾಭ. ಯಾವ ಸುಧಾರಣೆಗಳಿಗಾಗಿ ಈ ಯುದ್ಧವನ್ನು ಹೂಡಿದರೋ ಆ ಸುಧಾರಣೆಗಳು ಆಗಲೇ ಇಲ್ಲ. ಜನತೆಯ ಸ್ಥಿತಿ ಮೊದಲಿನ ಹಾಗೆಯೇ ಇದೆ.

ಹಿಂದೂಸ್ಥಾನದಲ್ಲಿಯೂ ಆ ಪರಿಸ್ಥಿತಿ ಬರಲಿ ಎಂದು ನೀವು ಆಶಿಸಲಾರಿರಿ. ನಿಮ್ಮ ಕೈಗೆ ರಾಜ್ಯದ ಸೂತ್ರ ಬರಬೇಕೆಂದಲ್ಲ ನಿಮ್ಮ ಇಚ್ಛೆ; ಹಿಂದೂಸ್ಥಾನದ ಜನಸ್ತೋಮಕ್ಕೆ ಸುಖ ಸಿಗಬೇಕೆಂಬುದಲ್ಲವೆ? ಹಾಗಿದ್ದರೆ, ಈ ಅಪಾರ ಜನತೆ ಹೇಗೆ ಸ್ವತಂತ್ರವಾದೀತು ಎಂಬುದೊಂದೇ ವಿಚಾರ ನಾವು ಮಾಡಬೇಕಾದುದು. ಈಗ ಎಷ್ಟೋ ದೇಶೀ ಸಂಸ್ಥಾನಗಳಲ್ಲಿ ಪ್ರಜೆ ಹಿಟ್ಟು ಹಿಟ್ಟಾಗಿದಾರೆ ಎಂಬುದನ್ನು ನೀವು ಒಪ್ಪುತ್ತೀರಷ್ಟೆ. ಆ ರಾಜರು ಬಹಳ ನಿರ್ದಯವಾಗಿ ಜನರನ್ನು ತುಳಿಯು ತ್ತಿದ್ದಾರೆ. ಇಂಗ್ಲಿಷರಿಗಿಂತ ಅವರ ದಬ್ಬಾಳಿಕೆ ಹೆಚ್ಚಾಗಿದೆ. ಅಂಥ ದಬ್ಬಾಳಿಕೆ ಹಿಂದೂಸ್ಥಾನದಲ್ಲಿ ಇರಬೇಕು ಎಂದರೆ ನಮಗೆ ಏಕಾಭಿಪ್ರಾಯ ಸಾಧ್ಯವೇ ಇಲ್ಲ. ಇಂಗ್ಲಿಷರು ಹೊರಟು ಹೋಗಲಿ, ದೇಶೀ ರಾಜರ ಈ ದಬ್ಬಾಳಿಕೆಗೆ ತುತ್ತಾಗಿ ಜನಕೆ ಹುಡಿಯಾಗಲಿ ಎಂದು ನನ್ನ ದೇಶಾಭಿಮಾನ ನನಗೆ ಕಲಿಸಿಲ್ಲ. ನನಗೆ ಶಕ್ತಿಯಿದ್ದರೆ ಇಂಗ್ಲಿಷರನ್ನು ವಿರೋಧಿಸುವಂತೆಯೇ ಈ ರಾಜರ ದೌರ್ಜನ್ಯವನ್ನೂ ವಿರೋಧಿಸುತ್ತೇನೆ. ದೇಶಾಭಿಮಾನವೆಂದರೆ ನನಗೆ ಸಮಗ್ರ ರಾಷ್ಟ್ರದ ಕಲ್ಯಾಣ. ಇಂಗ್ಲಿಷರ ಕೈಯಿಂದ ಕಲ್ಯಾಣವಾಗುವಂತಿದ್ದರೆ ಅವರಿಗೆ ನಾನು ತಲೆಬಾಗುತ್ತೇನೆ. ಹಿಂದೂಸ್ಥಾನದ ಸ್ವಾತಂತ್ರ್ಯವನ್ನು ಗಳಿಸಲು ಇಂಗ್ಲಿಷರು ಯಾರಾದರೂ ತಮ್ಮ ಬಾಳನ್ನು ಮುಡುಪಿಟ್ಟರೆ, ಈ

ದೌರ್ಜನ್ಯವನ್ನು ವಿರೋಧಿಸಿ, ನಮ್ಮ ದೇಶದ ಸೇವೆ ಮಾಡಿದರೆ, ಅಂಥ ಇಂಗ್ಲಿಷ್ ವ್ಯಕ್ತಿಯನ್ನು ಭಾರತೀಯನೆಂದೇ ನಾನು ಸ್ವಾಗತಿಸುತ್ತೇನೆ.

ಅಲ್ಲದೆ, ಇಟಲಿಯ ಹಾಗೆ ಕಾದಲು ಹಿಂದೂಸ್ಥಾನಕ್ಕೆ ಆಯುಧಗಳು ಬೇಕು. ಇದನ್ನು ನೀವು ಯೋಚಿಸಿಲ್ಲ. ಇಂಗ್ಲಿಷರು ಶಸ್ತ್ರ ಸನ್ನದ್ಧರು. ನನಗೆ ಅದರ ಅಂಜಿಕೆಯಿಲ್ಲ. ಆದರೆ ಅವರನ್ನು ಸಶಸ್ತ್ರರಾಗಿ ಇದಿರಿಸಬೇಕಾದರೆ ಲಕ್ಷಾಂತರ ಜನ ಭಾರತೀಯರು ಆಯುಧಪಾಣಿಗಳಾಗಬೇಕು. ಅದು ಸಾಧ್ಯ ಎಂದರೂ ಎಷ್ಟು ವರ್ಷ ಬೇಕು ಅದಕ್ಕೆ? ಅಷ್ಟಲ್ಲದೆ, ದೊಡ್ಡ ಪ್ರಮಾಣದಲ್ಲಿ ಹಿಂದೂಸ್ಥಾನವನ್ನು ಸಾಯುಧವಾಗಿ ಮಾಡುವುದು ಎಂದರೆ ಹಿಂದೂಸ್ಥಾನವನ್ನೂ ಯೂರೋಪಿನ ಹಾಗೆ ಮಾಡುವುದು. ಆಮೇಲೆ ಯೂರೋಪಿನ ಶೋಚನೀಯ ಸ್ಥಿತಿಯೇ ಇಲ್ಲಿಯೂ ಬರುತ್ತದೆ. ಸ್ವಲ್ಪದರಲ್ಲಿ ಹಿಂದೂಸ್ಥಾನ ಯೂರೋಪಿನ ನಾಗರಿಕತೆಯನ್ನು ಅವಲಂಬಿಸಬೇಕು ಎಂದ ಹಾಗೆ. ನಮ್ಮ ಉದ್ದೇಶ ಅದೇ ಆದರೆ, ಆ ನಾಗರಿಕತೆ ಯಲ್ಲಿ ಪರಿಣಿತರಾದ ಇಂಗ್ಲಿಷರು ಇಲ್ಲಿರುವುದು ಸರ್ವೋತ್ತಮ. ಅವರೊಡನೆ ಹೊಡೆದಾಡಿ ಒಂದೆರಡು ಅಧಿಕಾರ ತೆಗೆದುಕೊಳ್ಳೋಣ, ಕಾಲ ಕಳೆಯೋಣ. ಆದರೆ ಹಿಂದೂಸ್ಥಾನದ ಜನತೆ ಮಾತ್ರ ಆಯುಧ ಹಿಡಿಯದು. ಆಯುಧ ಹಿಡಿಯದಿರುವುದೇ ಒಳಿತು.

**ಓದುಗ** : ನೀವು ಉತ್ಪ್ರೇಕ್ಷೆ ಮಾಡುತ್ತಿದ್ದೀರಿ. ಎಲ್ಲರೂ ಏಕೆ ಆಯುಧ ಹಿಡಿಯಬೇಕು? ಮೊದಲು ಕೆಲವರು ಇಂಗ್ಲಿಷರ ಕೊಲೆ ಮಾಡಿ, ಹೆದರಿಕೆ ಹುಟ್ಟಿಸುತ್ತೇವೆ; ಆಮೇಲೆ ಆಯುಧಪಾಣಿಗಳಾದ ಕೆಲವರು ಆ ವೇಳೆಗೆ ಸಿದ್ಧರಾಗಿ ಬಹಿರಂಗವಾಗಿ ಯುದ್ಧಮಾಡುತ್ತಾರೆ. ಹೀಗೆ ಮೊದಲು ೨೦-೨೫ ಲಕ್ಷ ಜನ ನಮ್ಮವರು ನಷ್ಟವಾದಾರು. ಕಡೆಗೆ ದೇಶವನ್ನೇ ಗೆದ್ದುಕೊಂಡೇವು. ಗೆರಿಲ್ಲಾ ಯುದ್ಧ ನಡೆಸಿ ಇಂಗ್ಲಿಷರನ್ನು ಸೋಲಿಸುತ್ತೇವೆ.

**ಸಂಪಾದಕ** : ಸರಿ ಸರಿ : ಈ ಪವಿತ್ರ ಭೂಮಿಯನ್ನು ಅಪವಿತ್ರಗೊಳಿಸಬೇಕು. ಕೊಲೆಮಾಡಿ ನೆತ್ತರು ಹರಿಯಿಸಿ ಹಿಂದೂಸ್ಥಾನವನ್ನು ಸ್ವತಂತ್ರಗೊಳಿಸುವ ವಿಚಾರ ನಿಮಗೆ ನಡುಕ ಹುಟ್ಟಿಸದೆ? ನಾವು ಮಾಡಬೇಕಾದುದು ಪರರ ಹತ್ಯೆಯಲ್ಲ. ಆತ್ಮಹತ್ಯೆ. ಪರರನ್ನು ಕೊಲ್ಲುವುದು ಹೇಡಿತನದ ವಿಚಾರ. ಈ ಕೊಲೆ

ಕಡಿತಗಳಿಂದ ಯಾರನ್ನು ಸ್ವತಂತ್ರಗೊಳಿಸುತ್ತೀರಿ ನೀವು? ಹಿಂದೂಸ್ಥಾನದ ಜನಕೋಟಿಗೆ ಅದು ಇಷ್ಟವಿಲ್ಲ. ಆಧುನಿಕ ಆಸುರೀ ನಾಗರಿಕತೆಯ ಪಿಶಾಚಿ ಹಿಡಿದವರಿಗೇ ಇಂಥ ವಿಚಾರ ಬರುವುದು. ಕಡಿತ ಕೊಲೆಗಳಿಂದ ರಾಜ್ಯ ಗಳಿಸಿದವರು ಎಂದಿಗೂ ರಾಷ್ಟ್ರಕ್ಕೆ ಸುಖವನ್ನು ಕೊಡಲಾರರು. ಧಿಂಗ್ರಾ, ಅವನಂಥವರು ಮಾಡಿದ ಕೊಲೆಗಳಿಂದ ಹಿಂದೂಸ್ಥಾನಕ್ಕೆ ಲಾಭವಾಗಿದೆ ಎಂಧು ತಿಳಿದವರು ಬರೀ ಭ್ರಾಂತರು. ಧಿಂಗ್ರಾ ದೇಶಭಕ್ತನೇ. ಆದರೆ ಅದು ಕಣ್ಣಿಲ್ಲದ ಕುರುಡು ದೇಶಪ್ರೇಮ. ತಪ್ಪುದಾರಿಯಲ್ಲಿ ಅವನು ಬಲಿದಾನ ಕೊಟ್ಟ, ಅದರ ಪರಿಣಾಮ ಹಾನಿಕರವೇ ಆದೀತು.

**ಓದುಗ :** ಆದರೆ ಇಂಗ್ಲಿಷರು ಈ ಕೊಲೆಗಳಿಂದ ಗಾಬರಿಯಾಗಿರುವುದು ನಿಜ. ಲಾರ್ಡ್ ಮಾರ್ಲೆ ಈ ಹೆದರಿಕೆಯಿಂದಲೇ ಕೆಲವು ಸುಧಾರಣೆಗಳನ್ನು ಕೊಟ್ಟದ್ದು.

**ಸಂಪಾದಕ :** ಇಂಗ್ಲಿಷರು ಹೇಡಿಗಳೂ ಹೌದು, ವೀರರೂ ಹೌದು. ಮದ್ದು ಗುಂಡಿನ ಪರಿಣಾಮ ಅವರ ಮೇಲೆ ಬಹಳ ಬೇಗ ಆಗುತ್ತದೆ. ಇದನ್ನೂ ಬಲ್ಲೆ. ಹೆದರಿಕೆಯಿಂದಲೇ ಲಾರ್ಡ್ ಮಾರ್ಲೆ ಸುಧಾರಣೆಗಳನ್ನು ಕೊಟ್ಟಿರಲೂಬಹುದು. ಹಾಗೆ ಹೆದರಿಕೆಯಿಂದ ಕೊಟ್ಟದ್ದು ಹೆದರಿಕೆಯಿರುವವರಿಗೆ ಮಾತ್ರ ಇದ್ದೀತು.



## ಅಧ್ಯಾಯ – 16

# ಪಶುಬಲ

**ಓದುಗ :** ಇದೇನೋ ಹೊಸ ಸಿದ್ಧಾಂತ ತೆಗೆದಿರಿ; ಹೆದರಿಸಿ ಗಳಿಸಿದುದು ಹೆದರಿಕೆಯಿರುವವರೆಗೆ ಮಾತ್ರ ಇರುತ್ತದೆ. ಕೊಟ್ಟುದೇನೋ ಆಯಿತು. ಅದನ್ನು ಹಿಂತೆಗೆದುಕೊಳ್ಳುತ್ತಾರೆಯೇ?

**ಸಂಪಾದಕ :** ಹಾಗಲ್ಲ. 1857ರ ರಾಜಘೋಷಣೆ ಒಂದು ವಿದ್ರೋಹದ ಕೊನೆಯಲ್ಲಿ ಮಾಡಿದುದು. ಜನರನ್ನು ಶಾಂತಗೊಳಿಸಲು ಮಾಡಿದುದು. ಶಾಂತಿ ಸ್ಥಾಪನೆಗಾಗಿ ಜನರು ಮತ್ತೆ ಸರಳ ಮಾರ್ಗ ಹಿಡಿದ ಮೇಲೆ ಆ ಘೋಷಣೆಯ ತಿರುಳನ್ನು ಅಳಕಮಾಡಿದರು. ಶಿಕ್ಷೆಗೆ ಹೆದರಿ ನಾನು ಕಳ್ಳತನ ಬಿಟ್ಟರೆ, ಆ ಹೆದರಿಕೆ ತೀರಿದೊಡನೆ ಮತ್ತೆ ಮಾಡುತ್ತೇನೆ. ಇದು ಲೋಕಾನುಭವ, ಮನುಷ್ಯನನ್ನು ಹೊಡೆದು ಬಡೆದು ಅವನಿಂದ ಕೆಲಸ ಮಾಡಿಸಿಕೊಳ್ಳಬಹುದು ಎಂದು ನಾವು ತಿಳಿದಿದ್ದೇವೆ. ಅದರಿಂದ ನಾವು ಬಲಪ್ರಯೋಗ ಮಾಡುತ್ತ ಬಂದಿದ್ದೇವೆ.

**ಓದುಗ :** ನಿಮಗೇ ವಿರೋಧವಾಗಿ ನೀವು ಮಾತಾನಾಡುತ್ತಿದ್ದೀರಲ್ಲ. ಇಂಗ್ಲಿಷರು ತಮ್ಮ ದೇಶದಲ್ಲಿ ಗಳಿಸಿದುದೆಲ್ಲಾ ಕಾದಾಡಿಯೇ ತಾನೆ? ಅವರು ಗಳಿಸಿದುದೆಲ್ಲವೂ ವ್ಯರ್ಥ ಎಂದು ಮೊದಲೇ ಹೇಳಿದೀರಿ. ಬಲ್ಲೆ. ಆದರೆ ಅದರಿಂದ ನನ್ನ ತರ್ಕಕ್ಕೆ ಅಡ್ಡಿಯಿಲ್ಲ. ಅವರಿಗೆ ನಿಷ್ಪ್ರಯೋಜಕ ವಸ್ತುವೇ ಬೇಕಾಗಿತ್ತು. ಅದನ್ನೇ ಸಾಧಿಸಿದರು. ಅವರ ಇಷ್ಟಾರ್ಥ ನೆರವೇರಿತು ಎಂಬುದು ನನ್ನ ಮಾತು. ಯಾವ ಸಾಧನವಾದರೇನು? ನಮ್ಮ ಉದ್ದೇಶ್ಯ ಒಳ್ಳೆಯದಾದರೆ ಯಾವ ಸಾಧನದಿಂದ ಅದನ್ನು ಸಾಧಿಸಿದರೇನು? ಹೊಡೆದಾಡಿ ಹಿಂಸೆಮಾಡಿ ಸಾಧಿಸಿದರೆ ತಾನೆ ಏನು? ಏಕೆ ಕೂಡದು? ಮನೆಯೊಳಕ್ಕೆ ಕಳ್ಳ ನುಗ್ಗಿದರೆ ನಾವು ಯಾವ

ಸಾಧನವನ್ನು ಉಪಯೋಗಿಸೋಣ ಎಂದು ಆಲೋಚಿಸುತ್ತೇವೆಯೆ? ಹೇಗಾದರೂ ಅವನನ್ನು ಹೊರಗೋಡಿಸುವುದೇ ನನ್ನ ಕೆಲಸ.

ಬಿನ್ನಹಗಳನ್ನು ಬರೆದುಕೊಂಡು ನಾವು ಏನನ್ನೂ ಸಾಧಿಸಲಿಲ್ಲ. ಸಾಧಿಸುವುದೂ ಇಲ್ಲ ಎಂದು ನೀವೂ ಒಪ್ಪಿಕೊಂಡಂತೆ ಕಾಣುತ್ತದೆ. ಹಾಗಾದರೆ ಹೊಡೆದಾಡಿ ಹಿಂಸೆಯನ್ನು ಬಳಸಿ ಸಾಧಿಸೋಣ. ಅದರಿಂದ ನಮಗೆ ಏನು ಸಿಗುತ್ತದೆಯೋ ಅದನ್ನು ಅಗತ್ಯವಿದ್ದರೆ ಹೆದರಿಕೆಯಿಟ್ಟೇ ಉಳಿಸಿಕೊಳ್ಳೋಣ. ಒಂದು ಮಗು ಬೆಂಕಿಯಲ್ಲಿ ಕಾಲಿಡುತ್ತಿದ್ದರೆ, ಅದನ್ನು ತಡೆಯಲು ಬಲಪ್ರಯೋಗ ಮಾಡಿದರೆ ತಪ್ಪೇ? ಹೇಗೋ ಅಂತೂ ನಮ್ಮ ಉದ್ದೇಶವನ್ನು ಸಾಧಿಸಬೇಕು.

**ಸಂಪಾದಕ :** ನಿಮ್ಮ ವಾದ ಚೆನ್ನಾಗಿದೆ. ಈ ವಾದಕ್ಕೆ ಅನೇಕರು ಮರುಳಾಗಿದ್ದಾರೆ. ನಾನೂ ಹಿಂದೆ ಇದೇ ವಾದ ಮಾಡಿದ್ದೇನೆ. ನಿಮ್ಮ ಪರೆಯನ್ನೂ ಬಿಡಿಸುವ ಯತ್ನ ಮಾಡುತ್ತೇನೆ. ಇಂಗ್ಲಿಷರು ಪಶುಬಲವನ್ನು ಉಪಯೋಗಿಸಿ ತಮ್ಮ ಗುರಿಯನ್ನು ಸಾಧಿಸಿದರು; ಆದುದರಿಂದ ನಾವು ಪಶುಬಲವನ್ನು ಪ್ರಯೋಗಿಸಿ ನಮ್ಮ ಗುರಿಯನ್ನು ಸಾಧಿಸಿಬೇಕೆಂಬುದನ್ನು ಮೊದಲು ತೆಗೆದುಕೊಳ್ಳೋಣ. ಅವರು ಪಶುಬಲವನ್ನು ಪ್ರಯೋಗಿಸಿದುದು ನಿಜ; ನಾವೂ ಹಾಗೆಯೇ ಮಾಡಬಹುದು. ಆ ಸಾಧನವನ್ನು ಉಪಯೋಗಿಸಿದರೆ ಅವರಿಗೆ ದೊರೆತ ಫಲವೇ ನಮಗೂ ಸಿಗುತ್ತದೆ. ನಮಗೆ ಅದು ಬೇಕಾಗಿಲ್ಲ ತಾನೆ? ಸಾಧನಕ್ಕೂ ಉದ್ದೀಶ್ಯಕ್ಕೂ ಏನೂ ಸಂಬಂಧವಿಲ್ಲವೆಂದು ನೀವು ತಿಳಿದಿರುವಂತೆ ಕಾಣುತ್ತದೆ. ಇದು ದೊಡ್ಡ ತಪ್ಪು. ಈ ತಪ್ಪಿನ ಮೂಲಕ ಧರ್ಮಾತ್ಮರೆನಿಸಿಕೊಂಡವರು ಸಹ ಘೋರ ಕರ್ಮಗಳನ್ನು ಮಾಡಿದ್ದಾರೆ. ನೀವು ಹೇಳುವ ತರ್ಕ ಬೇವು ನೆಟ್ಟು ಮಾವು ಪಡೆಯೋಣ ಎಂಬ ತರ್ಕ. ಕಡಲನ್ನು ದಾಟಬೇಕಾದರೆ ಹಡಗು ಬೇಕು. ಎತ್ತಿನ ಗಾಡಿಯಲ್ಲಿ ಕುಳಿತು ಕಡಲನ್ನು ದಾಟಹೋದರೆ ಗಾಡಿಯೂ ಮುಳುಗುತ್ತದೆ, ನಾನೂ ಮುಳುಗುತ್ತೇನೆ. 'ಎಂಥ ದೇವರೋ ಅಂಥ ಪೂಜೆ' ಎಂಬ ಗಾದೆ ಒಂದಿದೆ. ಅದನ್ನು ಅರಿತುಕೊಳ್ಳಬೇಕು. ಅದಕ್ಕೆ ತಪ್ಪು ಅರ್ಥಮಾಡಿ ಜನರು ದಾರಿ ತಪ್ಪಿದಾರೆ. ಸಾಧನ ಬೀಜದ ಹಾಗೆ. ಸಾಧ್ಯ ಗಿಡದ ಹಾಗೆ. ಬೀಜ–ವೃಕ್ಷ ಸಂಬಂಧ ಹೇಗೋ ಸಾಧನ–ಸಾಧ್ಯಗಳ ಸಂಬಂಧವೂ ಹಾಗೇ. ಸೈತಾನನ ಉಪಾಸನೆ ಮಾಡಿ ಈಶ್ವರ ಭಜನೆಯ ಫಲ ಬೇಕು ಎಂದರೆ ಸಿಗದು. ಯಾರಾದರೂ ನಾವು ದೇವರಪೂಜೆ ಮಾಡಬೇಕು. ಸೈತಾನನ ವಿಗ್ರಹಕ್ಕೆ ಪೂಜೆ ಮಾಡಿದರೆ ದೇವರಪೂಜೆ

ಆಗುವುದಿಲ್ಲವೇನು? ಎಂದರೆ ಬರೀ ಮೂರ್ಖತನದ ಮಾತು ಎನ್ನುತ್ತೇವೆ. ಬಿತ್ತಿದಂತೆ ಬೆಳೆ. 1833ರಲ್ಲಿ ಹಿಂಸೆಯಿಂದ ಹೆಚ್ಚು ಮತಾಧಿಕಾರವನ್ನು ಪಡೆದರು. ಪಶುಬಲವನ್ನು ಪ್ರಯೋಗಿಸಿ ತಮ್ಮ ಕರ್ತವ್ಯವನ್ನು ಚೆನ್ನಾಗಿ ತಿಳಿದು ಕೊಂಡಂತಾಯಿತೆ? ಅವರಿಗೆ ಮತಾಧಿಕಾರ ಬೇಕಿತ್ತು. ಪಶುಬಲದಿಂದ ಅದನ್ನು ಗಳಿಸಿದರು. ಆದರೆ ನಿಜವಾದ ಅಧಿಕಾರ ಬರುವುದು ಕರ್ತವ್ಯಪಾಲನೆಯಿಂದ. ಅದು ಅವರಿಗೆ ಸಿಗಲಿಲ್ಲ. ಈಗ ಇಂಗ್ಲೆಂಡಿನಲ್ಲಿ ಎಲ್ಲರೂ ಅಧಿಕಾರ ಬೇಡುವಲ್ಲಿ ಯಾರು ಯಾರಿಗೆ ಕೊಡಬೇಕು? ಅವರು ಯಾವ ಕರ್ತವ್ಯವನ್ನೂ ಮಾಡರು ಎನ್ನುವುದಿಲ್ಲ ನಾನು. ತಾವು ಬಯಸುವ ಅಧಿಕಾರ ಪಡೆಯಲು ಬೇಕಾದ ಕರ್ತವ್ಯಗಳನ್ನು ಮಾಡರು. ಆ ಕರ್ತವ್ಯ ಮಾಡಿ ಅರ್ಹತೆಯನ್ನು ಪಡೆಯದೆಯೆ ಅಧಿಕಾರ ಬೇಕೆನ್ನುವುದರಿಂದ ಅಧಿಕಾರ ಅವರ ಕೊರಳಿಗೆ ನೇಣು ಆಗಿದೆ. ಬೇರೆ ಮಾತಿನಲ್ಲಿ ಅವರು ಉಪಯೋಗಿಸಿದ ಸಾಧನಗಳಿಗೆ ತಕ್ಕ ಫಲ ಅವರಿಗೆ ದೊರೆತಿದೆ. ಆ ಫಲಕ್ಕೆ ತಕ್ಕ ಸಾಧನಗಳನ್ನು ಅವರು ಪ್ರಯೋಗಿಸಿದರು. ನಿಮ್ಮ ಗಡಿಯಾರವನ್ನು ಕಿತ್ತುಕೊಳ್ಳಬೇಕೆಂದರೆ ನಾನು ನಿಮ್ಮೊಡನೆ ಹೊಡೆದಾಡಬೇಕು. ಅದನ್ನು ಕೊಳ್ಳಬೇಕೆಂದರೆ ಬೆಲೆಯನ್ನು ಕೊಡಬೇಕು. ಅದನ್ನು ಬಹುಮಾನವಾಗಿ ಪಡೆಯಬೇಕೆಂದರೆ ನಿಮ್ಮನ್ನು ಬೇಡಬೇಕು. ನಾನು ಯಾವ ಸಾಧನವನ್ನು ಉಪಯೋಗಿಸುತ್ತೇನೋ ತದನುಸಾರ ಆ ಗಡಿಯಾರ, ಕಳವು ಮಾಲು, ಸ್ವಂತ ಪದಾರ್ಥ, ಕಾಣಿಕೆ ಆಗುತ್ತದೆ. ಮೂರು ಬೇರೆ ಬೇರೆ ಸಾಧನಗಳಿಂದ ಮೂರು ಬೇರೆ ಬೇರೆ ಪರಿಣಾಮಗಳಾದವು. ಇಷ್ಟಾದರೂ ಸಾಧನದ್ದೇನು ದೊಡ್ಡ ವಿಷಯ ಎನ್ನುತ್ತೀರಾ?

ನೀವು ಹೇಳಿದ ಕಳ್ಳನ ದೃಷ್ಟಾಂತವನ್ನೆ ತೆಗೆದುಕೊಳ್ಳಿ. ಕಳ್ಳನನ್ನು ಯಾವ ರೀತಿಯಲ್ಲಾದರೂ ಓಡಿಸಿದರಾಯಿತು ಎಂದು ನಾನು ಒಪ್ಪುವುದಿಲ್ಲ. ಕದಿಯಲು ಬಂದುದು ನನ್ನ ತಂದೆಯೇ ಆದರೆ ಒಂದು ರೀತಿಯನ್ನು ಅನುರಿಸುತ್ತೇನೆ. ಬಂದವನು ಒಬ್ಬ ಪರಿಚಿತನಾದರೆ ಮತ್ತೊಂದು ರೀತಿ, ಅಪರಿಚಿತನೇ ಆದರೆ ಮೂರನೆಯ ರೀತಿ. ಹಿಂದೂಸ್ಥಾನಿ ಕಳ್ಳನಾದರೆ ಒಂದು ರೀತಿ, ಪರಂಗಿ ಕಳ್ಳನಾದರೆ ಒಂದು ರೀತಿ ಎನ್ನುತ್ತೀರೇನೋ ನೀವು? ದುರ್ಬಲನೊಬ್ಬ ಕದಿಯಲು ಬಂದರೆ ಒಂದು ರೀತಿ, ಬಲಿಷ್ಠನಾದವನು ಬಂದರೆ ಒಂದು ರೀತಿ. ಕಳ್ಳ ಪೂರ್ಣ ಆಯುಧಪಾಣಿಯಾಗಿದ್ದರೆ ಸುಮ್ಮನಿರುತ್ತೇನೆ. ತಂದೆಯಿಂದ ಹಿಡಿದು ಆಯುಧ

ಪಾಣಿಯವರೆಗೆ ನಾನಾ ಸಾಧನಗಳಿವೆ. ಹೀಗೂ ಯೋಚಿಸುತ್ತೇನೆ; ಬಂದ ಕಳ್ಳ ತಂದೆಯೇ ಆಗಲಿ ಆಯುಧಪಾಣಿಯೆ ಆಗಲಿ, ನಾನು ಕಣ್ಣು ಮುಚ್ಚಿ ನಿದ್ದೆಯನ್ನು ನಟಿಸುತ್ತೇನೆ, ಇಬ್ಬರೂ ಆಯುಧಪಾಣಿಗಳೇ, ಇಬ್ಬರೂ ಬಲಿಷ್ಠರೇ. ಆ ಬಲಕ್ಕೆ ಸೋತು ಕಳವು ಮಾಡಿದರೆ ಮಾಡಲಿ ಎಂದು ಸುಮ್ಮನಿದ್ದೇನು. ತಂದೆಯ ಬಲ ನನ್ನಲ್ಲಿ ಕನಿಕರ ಹುಟ್ಟಿಸಿ ಅಳುವಂತೆ ಮಾಡೀತು; ಆಯುಧಪಾಣಿಯ ಬಲ ಸಿಟ್ಟನ್ನು ಹುಟ್ಟಿಸಿ ಇಬ್ಬರನ್ನೂ ಶತ್ರುಗಳಾಗಿ ಮಾಡೀತು. ಹೀಗಿದೆ ಈ ವಿಚಿತ್ರ ಪ್ರಸಂಗ. ಈ ಉದಾಹರಣೆಗಳಲ್ಲಿ ಯಾವ ಪ್ರಸಂಗದಲ್ಲಿ ಯಾವ ರೀತಿ ನಡೆಯಬೇಕೆಂಬುದರ ವಿಷಯದಲ್ಲಿ ನಮಗೆ ಏಕಾಭಿಪ್ರಾಯ ಇಲ್ಲದಿರಬಹುದು. ಇವೆಲ್ಲ ಸಂದರ್ಭಗಳಲ್ಲಿಯೂ ಏನು ಮಾಡಬೇಕೆಂಬುದು ನನಗೆ ಸ್ಪಷ್ಟವಾಗಿ ಕಾಣುತ್ತಿದೆ. ನೀವು ಅದನ್ನು ಕೇಳಿ ಗಾಬರಿಯಾಗಬಹುದು. ಆದುದರಿಂದ ಸ್ವಲ್ಪ ಸಂಕೋಚವಾಗುತ್ತದೆ. ಸದ್ಯ, ನಿಮ್ಮ ಊಹೆಗೇ ಅದನ್ನು ಬಿಡುತ್ತೇನೆ. ನೀವು ಊಹಿಸಲಾರದಿದ್ದರೆ, ಬೇರೆ ಬೇರೆ ಸಂದರ್ಭದಲ್ಲಿ ಬೇರೆ ಬೇರೆ ಉಪಾಯ ಮಾಡಬೇಕಾದೀತು ಎಂಬುದಾದರೂ ಸ್ಪಷ್ಟವೆ? ಏನಾದರೂ ಉಪಾಯ ಮಾಡಿದರೆ ಕಳ್ಳನನ್ನು ಓಡಿಸಲಾಗುವುದಿಲ್ಲ. ಪ್ರತಿಯೊಂದು ಸಂದರ್ಭಕ್ಕೂ ತಕ್ಕ ಉಪಾಯವನ್ನೇ ಹಿಡಿಯಬೇಕು. ಆದುದರಿಂದ ಮನಸ್ಸಿಗೆ ಬಂದ ಉಪಾಯದಿಂದ ಕಳ್ಳನನ್ನು ಓಡಿಸುವುದು ಅಲ್ಲ ನಿಮ್ಮ ಧರ್ಮ ಎಂಬುದು ಸ್ಪಷ್ಟ

ಇನ್ನೂ ಸ್ವಲ್ಪ ದೂರ ಹೋಗೋಣ. ಆ ಆಯುಧಪಾಣಿ ನಿಮ್ಮ ಪದಾರ್ಥವನ್ನು ಕದ್ದಿದ್ದಾನೆ. ಈ ಮಾತು ನಿಮ್ಮ ಮನಸ್ಸಿನಲ್ಲಿ ಸುಳಿಯುತ್ತಲೇ ಇದೆ. ಕೋಪ ಬಂದಿದೆ. ನಿಮಗಾಗಿ ಅಲ್ಲದಿದ್ದರೂ ನೆರೆಹೊರೆಯವರ ಕ್ಷೇಮಕ್ಕಾಗಿ ಆ ನೀಚನನ್ನು ಶಿಕ್ಷಿಸಬೇಕು ಎನ್ನುತ್ತೀರಿ. ಕೆಲವರು ಆಯುಧಪಾಣಿಗಳನ್ನು ಕಲೆಹಾಕಿದೀರಿ. ಅವನ ಮನೆಯನ್ನು ಆಕ್ರಮಿಸಬೇಕೆನ್ನುತ್ತೀರಿ. ಅವನು ಓಡಿಹೋಗುತ್ತಾನೆ. ಅವನಿಗೂ ರೇಗಿತು. ಅವನೂ ಕೆಲವರು ಕಳ್ಳರನ್ನು ಗುಂಪು ಕಟ್ಟಿದ. ಹಗಲು ಹೊತ್ತೇ ನಿಮ್ಮ ಮನೆಯನ್ನು ದರೋಡೆ ಮಾಡುವುದಾಗಿ ಗರ್ವದಿಂದ ನಿಮಗೆ ಹೇಳಿ ಕಳಿಸಿದ. ನೀವು ಬಲಿಷ್ಠರು. ನಿಮಗೆ ಅವನ ಹೆದರಿಕೆಯಿಲ್ಲ. ಬರಲಿ ನೋಡೋಣ ಎನ್ನುತ್ತೀರಿ. ಇಷ್ಟರಲ್ಲಿ ಆ ಕಳ್ಳ ನಿಮ್ಮ ನೆರೆಹೊರೆಯವರನ್ನು ಪೀಡಿಸುತ್ತಾನೆ. ಅವರು ನಿಮಗೆ ದೂರು ಹೇಳುತ್ತಾರೆ. 'ನಿಮಗಾಗಿ ಅಲ್ಲವೆ ನಾನು ಇದೆಲ್ಲ ಮಾಡುತ್ತಿರುವುದು? ನನ್ನ ಪದಾರ್ಥ ಹೋದುದರ ಚಿಂತೆಯಿಲ್ಲ', ಎನ್ನುತ್ತೀರಿ ನೀವು. ಮೊದಲು

ನಮಗೆ ಈ ಬಾಧೆಯೆ ಇರಲಿಲ್ಲ, ನಿಮಗೂ ಅವನಿಗೂ ಹಾಗೆ ಮೊದಲಾದ ಮೇಲೆಯೆ ಈ ಸಂಕಟ ಎನ್ನುತ್ತಾರೆ ನೆರೆಹೊರೆಯವರು. ಹಾವು ಮುಂಗುಸಿಗಳ ನಡುವೆ ಆಯಿತು ನಿಮ್ಮ ಸ್ಥಿತಿ. ಬಡವರಲ್ಲಿ ನಿಮಗೆ ಕನಿಕರ. ಅವರು ಹೇಳಿದುದೆಲ್ಲ ನಿಜ. ಈಗ ನೀವೇನು ಮಾಡಬೇಕು? ಈಗ ಆ ಕಳ್ಳನನ್ನು ಕೈ ಬಿಟ್ಟರೋ ಮಾನಗೇಡು. ಆದುದರಿಂದ, ನೀವು ಅವರಿಗೆ 'ಏನೂ ಚಿಂತೆಯಿಲ್ಲ, ನನ್ನ ಐಶ್ವರ್ಯವೆಲ್ಲ ನಿಮ್ಮದೇ. ನಿಮಗೆ ನಾನು ಶಸ್ತ್ರಗಳನ್ನು ಕೊಡುತ್ತೇನೆ. ಅವನ್ನು ಹೇಗೆ ಪ್ರಯೋಗಿಸಬೇಕೋ ಹೇಳಿಕೊಡುತ್ತೇನೆ. ಆ ಕಳ್ಳನನ್ನು ಬಿಡಬೇಡಿ, ಮೈಮುರಿಯ ಹೊಡೆದುಬಿಡಿ' ಎನ್ನುತ್ತೀರಿ. ಹೀಗೆ ಆ ಕದನ ಕೆರಳಿತು. ಕಳ್ಳರೂ ಹೆಚ್ಚಾದರು. ನಿಮ್ಮ ನೆರೆಯವರು ಮನಃಪೂರ್ತಿಯಾಗಿ ಈ ಸಂಕಟವನ್ನು ತಂದುಕೊಂಡರು. ಆ ಕಳ್ಳನಿಗೆ ಮುಯ್ಯಿ ತೀರಿಸಲು ಹೋಗಿ ನಿಮ್ಮ ಶಾಂತಿಯನ್ನು ಕಳೆದುಕೊಂಡಿರಿ. ಯಾವ ಗಳಿಗೆಯಲ್ಲಿ ಲೂಟಿಯೋ, ಹೊಡೆದಾಟವೋ ಎಂಬ ನಿರಂತರ ಚಿಂತೆಗೆ ನೀವು ಸಿಲುಕಿದಿರಿ. ನಿಮ್ಮ ಧೈರ್ಯ ಉಡುಗಿ ಹೇಡಿಗಳಾದಿರಿ. ಈ ಚಿತ್ರದಲ್ಲಿ ನಾನು ಸ್ವಲ್ಪವೂ ಉತ್ಪ್ರೇಕ್ಷೆ ಮಾಡಿಲ್ಲ. ಇದು ಒಂದು ಸಾಧನ.

ಎರಡನೆಯ ಸಾಧನವನ್ನು ನೋಡಿ. ಆ ಕಳ್ಳ ನಿಮ್ಮ ತಮ್ಮ ಎಂದುಕೊಳ್ಳಿ. ಅಜ್ಞಾನಿ. ಅವಕಾಶ ದೊರೆತಾಗ ಅವನಿಗೆ ತಿಳಿಸಿ ಹೇಳೋಣ. ಅವನೂ ಒಬ್ಬ ಮನುಷ್ಯನೆ ಅಲ್ಲವೆ? ಏಕೆ ಕಳ್ಳತನ ಮಾಡುತ್ತಾನೋ ಗೊತ್ತಿಲ್ಲ. ಆಗಲಿ, ಕಾಲ ಬಂದಾಗ ಅವನ ಕಳ್ಳತನದ ಮೂಲ ಕಾರಣವನ್ನೆ ನಾಶಮಾಡುತ್ತೇನೆ–ಎಂದುಕೊಳ್ಳುತ್ತೀರಿ. ಹೀಗೆ ನೀವು ಆಲೋಚಿಸುತ್ತಿರುವಾಗ ಅವನು ಕದಿಯಲು ಬರುತ್ತಾನೆ. ಆದರೆ ನೀವು ಸಿಟ್ಟಾಗದೆ ಅವನನ್ನು ಕನಿಕರಿಸುತ್ತೀರಿ. ಅವನಿಗೆ ಕದಿಯುವ ಚಟ ಒಂದು ರೋಗ ಅಂಟಿದ ಹಾಗೆ ಅಂಟಿದೆ. ಅಲ್ಲಿಂದ ಮುಂದೆ ನಿಮ್ಮ ಬಾಗಿಲು–ಕಿಟಕಿಗಳನ್ನೆಲ್ಲ ತೆರೆದಿಡುತ್ತೀರಿ. ಮಲಗುವ ಸ್ಥಳವನ್ನು ಬದಲಿಸುತ್ತೀರಿ. ನಿಮ್ಮ ಪದಾರ್ಥಗಳನ್ನೆಲ್ಲ ಅವನಿಗೆ ಸಿಗುವ ಹಾಗೆ ಇಡುತ್ತೀರಿ. ಕಳ್ಳ ಮತ್ತೆ ಬರುತ್ತಾನೆ. ಇದೆಲ್ಲವೂ ಏನೋ ಹೊಸದು, ಅವನಿಗೆ ಅರ್ಥವಾಗದು. ಆದರೂ ನಿಮ್ಮ ಪದಾರ್ಥಗಳನ್ನೇನೋ ತೆಗೆದುಕೊಂಡು ಹೋಗುತ್ತಾನೆ. ಅವನ ಮನಸ್ಸು ಮಾತ್ರ ಕಳವಳಗೊಳ್ಳುತ್ತಿದೆ ಅವನು ಹಳ್ಳಿಯಲ್ಲಿ ನಿಮ್ಮ ವಿಷಯ ವಿಚಾರಿಸುತ್ತಾನೆ. ನಿಮ್ಮ ವಿಶಾಲ ಹೃದಯ, ದಯಾಮಯತೆ ಅವನಿಗೆ ತಿಳಿಯುತ್ತದೆ. ಅವನು ಪಶ್ಚಾತ್ತಾಪಗೊಳ್ಳುತ್ತಾನೆ. ನಿಮ್ಮ ಪದಾರ್ಥಗಳನ್ನು ಹಿಂದಕ್ಕೆ ಕೊಟ್ಟು,

ಕದಿಯುವುದನ್ನು ಬಿಡುತ್ತಾನೆ. ನಿಮ್ಮ ಸೇವಕನಾಗುತ್ತಾನೆ. ನೀವು ಅವನಿಗೆ ಒಂದು ಉದ್ಯೋಗ ಕೊಡಿಸುತ್ತೀರಿ. ಇದು ಎರಡನೆಯ ಸಾಧನ.

ಹೀಗೆ ಎರಡು ಬೇರೆ ಬೇರೆ ದಾರಿಗಳಿಂದ ಬೇರೆ ಬೇರೆ ಫಲ ಸಿಕ್ಕಿತು. ಕಳ್ಳರೆಲ್ಲರೂ ಹೀಗೇ ಮಾಡುತ್ತಾರೆ ಎಂದು ನಾನು ಹೇಳುವುದಿಲ್ಲ. ಎಲ್ಲರಿಗೂ ನಿಮ್ಮ ಹಾಗೇ ಕನಿಕರವಿರುವುದಿಲ್ಲ. ನಾನು ಹೇಳುವುದಿಷ್ಟು: ಒಳ್ಳೆಯ ಫಲ ಬೇಕಾದರೆ ಒಳ್ಳೆಯ ಸಾಧನವೇ ಬೇಕು; ಅನೇಕ ಸಂದರ್ಭಗಳಲ್ಲಿ ಶಸ್ತ್ರಬಲಕ್ಕಿಂತ ದಯಾ–ಪ್ರೇಮಬಲ ಖಂಡಿತವಾಗಿಯೂ ಹೆಚ್ಚು ಶಕ್ತಿವಂತ. ಪಶುಬಲ ಪ್ರಯೋಗದಲ್ಲಿ ಹಾನಿಯಿದೆ, ಪ್ರೇಮಬಲದಲ್ಲಿ ಎಳ್ಳಷ್ಟು ಹಾನಿಯಿಲ್ಲ.

ಈಗ ಬಿನ್ನಹಗಳ ಮಾತು ನೋಡೋಣ. ಬಿನ್ನಹಕ್ಕೆ ಏನಾದರೂ ಬೆಂಬಲವಿದ್ದರೆ ಸರಿ. ಇಲ್ಲದಿದ್ದರೆ ವ್ಯರ್ಥ ಎಂಬುದು ನಿರ್ವಿವಾದ. ಆದರೂ ಸ್ವರ್ಗೀಯ ನ್ಯಾಯಮೂರ್ತಿ ರಾನಡೆ ಒಂದು ಮಾತು ಹೇಳುತ್ತಿದ್ದರು; ಬಿನ್ನಹಗಳಿಂದ ಜನರಿಗೆ ವಿಷಯ ತಿಳಿಸಬಹುದು; ಅದಕ್ಕೆ ಒಂದು ಸಾಧನ. ಜನರಿಗೆ ತಮ್ಮ ಪರಿಸ್ಥಿತಿಯನ್ನು ತಿಳಿಸುತ್ತವೆ. ಆಡಳಿತಗಾರರಿಗೆ ಒಂದು ಎಚ್ಚರಿಕೆ ಕೊಟ್ಟಂತಾಗುತ್ತದೆ. ಅದರಿಂದ ಬಿನ್ನಹಗಳು ಪೂರಾ ನಿಷ್ಪ್ರಯೋಜಕವಲ್ಲ. ಸಮಾನನ ಬಿನ್ನಹ ಅವನ ನಮ್ರತೆಯ ಕುರುಹು. ಗುಲಾಮನ ಬಿನ್ನಹ ಅವನ ಗುಲಾಮಗಿರಿಯ ಕುರುಹು. ಬೆಂಬಲವುಳ್ಳ ಬಿನ್ನಹ ಸಮಾನನದು. ಸಮಾನನಾದವನು ಬಿನ್ನಹದ ರೂಪದಲ್ಲಿ ತನ್ನ ಬೇಡಿಕೆಯನ್ನು ತಿಳಿಸಿದರೆ ಅದು ಅವನ ಗಾಂಭೀರ್ಯವನ್ನು ತೋರಿಸುತ್ತದೆ.

ಬಿನ್ನಹಗಳಿಗೆ ಎರಡು ಬಗೆಯ ಬೆಂಬಲ ಇರಬಹುದು. 'ಕೊಡದಿದ್ದರೆ ಹೊಡೆಯುತ್ತೇವೆ' ಎಂಬುದು ಒಂದು ಬಗೆಯ ಬಲ; ಇದು ಪಶುಬಲ. ಇದರ ದುಷ್ಪರಿಣಾಮಗಳನ್ನು ಆಗಲೇ ವರ್ಣಿಸಿದ್ದೇನೆ. ಎರಡನೆಯದು : 'ನಮ್ಮ ಬೇಡಿಕೆಯನ್ನು ಸಲ್ಲಿಸದಿದ್ದರೆ ನಾವು ಇನ್ನು ಮುಂದೆ ಬಿನ್ನಹ ಮಾಡುವುದೇ ಇಲ್ಲ. ನಿಮ್ಮ ಆಡಳಿತವನ್ನು ನಾವು ಒಪ್ಪಿದರೆ ನೀವು ನಮ್ಮನ್ನು ಆಳಬಹುದು. ಇಲ್ಲವಾದರೆ ಇಲ್ಲ. ಇನ್ನು ಮುಂದೆ ನಿಮ್ಮ ಸಂಬಂಧವೇ ನಮಗೆ ಬೇಡ' ಎಂಬುದು. ಇದರಲ್ಲಿರುವ ಬಲ ಪ್ರೇಮಬಲ, ಆತ್ಮಬಲ, ಸಾಮಾನ್ಯವಾಗಿ ಇದನ್ನು ಸತ್ಯಾಗ್ರಹ ಎನ್ನುತ್ತಾರೆ. ಈ ಬಲ ಅವಿನಾಶಿ. ತನ್ನ ಸ್ಥಿತಿಯನ್ನು ಪೂರಾ ಬಲ್ಲವನೇ

ಇದನ್ನು ಪ್ರಯೋಗಿಸಬಲ್ಲ. ನಮ್ಮಲ್ಲಿ ಹಳೆಯ ಗಾದೆಯಿದೆ - 'ಒಂದು ನಕಾರ ನೂರು ರೋಗಗಳಿಗೆ ಮದ್ದು.' ಈ ಆತ್ಮಬಲದ ಮುಂದೆ ಶಸ್ತ್ರಬಲ ನಿರ್ವೀರ್ಯ.

ಈಗ ನಿಮ್ಮ ಕಡೆಯ ಉದಾಹರಣೆಯನ್ನು ನೋಡೋಣ. ಮಗು ಬೆಂಕಿಯಲ್ಲಿ ಕಾಲಿಡುತ್ತಿದೆ. ತಡೆಯಬೇಕು. ನಿಮ್ಮ ದೃಷ್ಟಾಂತದಿಂದ ನೀವೇ ಸೋಲುತ್ತೀರಿ. ಮಗುವನ್ನು ಹೇಗೆ ತಡೆಯುತ್ತೀರಿ? ಅದರ ಬಲ ಹೆಚ್ಚಾಗಿ ನಿಮ್ಮನ್ನು ತಳ್ಳಿ ಅದು ಬೆಂಕಿಯೊಳಗೆ ನುಗ್ಗಿದರೆ ಏನು ಮಾಡುತ್ತೀರಿ? ನಿಮಗೆ ಇರುವುದು ಎರಡೇ ಮಾರ್ಗ-ಬೆಂಕಿಯಲ್ಲಿ ಬೀಳದ ಹಾಗೆ ತಡೆಯಲು ಅದನ್ನು ಕೊಲ್ಲಬೇಕು. ಅಥವಾ ನಿಮ್ಮ ಕಣ್ಣಿನ ಮುಂದೆ ಅದು ಬೆಂಕಿಯಲ್ಲಿ ಬಿದ್ದು ಸಾಯುವುದು ಇಷ್ಟವಿಲ್ಲದಿದ್ದರೆ ನೀವೇ ಬೆಂಕಿಗೆ ನುಗ್ಗಬೇಕು. ಅದನ್ನು ಕೊಲ್ಲಲಾರಿರಿ. ನಿಮ್ಮ ಎದೆಯಲ್ಲಿ ದಯಾಭಾವ ಪೂರ್ಣವಾಗಿರದಿದ್ದರೆ ನೀವು ನಿಮ್ಮ ಪ್ರಾಣ ಕೊಡಲಾರಿರಿ. ಆಗ ವಿಧಿಯಿಲ್ಲದೆ ಮಗು ಬೆಂಕಿಯಲ್ಲಿ ಬೀಳುವುದನ್ನು ನೋಡಬೇಕಾದೀತು. ಅಂತೂ ಪಶುಬಲವನ್ನೇನು ಪ್ರಯೋಗಿಸುವುದಿಲ್ಲ. ಶಕ್ತಿಯಿದ್ದರೆ ಮಗು ಬೆಂಕಿಗೆ ಹಾರದಂತೆ ನೀವು ಅದನ್ನು ಹಿಡಿದು ತಡೆಯಲೂ ಬಹುದು. ಅದೂ ಪಶುಬಲವೆ, ಕೆಳಗಿನ ಮಟ್ಟದ್ದು ಎನ್ನುತ್ತೀರೇನೋ, ಅಲ್ಲ ಆ ಬಲ ಬೇರೆ, ಅದನ್ನು ಅರಿತುಕೊಳ್ಳೋಣ.

ಮಗುವನ್ನು ಹಾಗೆ ತಡೆಯುವುದರಲ್ಲಿ ನಿಮಗೇನೂ ಸ್ವಾರ್ಥವಿಲ್ಲ. ಮಗುವಿನ ಹಿತವೇ ನಿಮ್ಮ ಗುರಿ. ಅದರ ಹಿತಕ್ಕಾಗಿಯೇ ನಿಮ್ಮ ಅಧಿಕಾರ ಚಲಾಯಿಸುತ್ತೀರಿ. ಈ ಉದಾಹರಣೆ ಇಂಗ್ಲಿಷರಿಗೆ ಅನ್ವಯಿಸುವುದಿಲ್ಲ. ಇಂಗ್ಲಿಷರ ಮೇಲೆ ಆಯುಧ ಹಿಡಿದರೆ ಅದು ನಿಮ್ಮ ನಿಮ್ಮ ರಾಷ್ಟ್ರದ ಸ್ವಾರ್ಥಕ್ಕೆ. ಅದರಲ್ಲಿ ದಯೆಯೂ ಇಲ್ಲ. ಪ್ರೇಮವೂ ಇಲ್ಲ. ಒಂದು ವೇಳೆ ನೀವು ಇಂಗ್ಲಿಷರ ಕೆಲಸ ಅಧಮವಾದುದು. ಅದು ಬೆಂಕಿಯ ಹಾಗೆ, ಅವರು ಅಜ್ಞಾನದಿಂದ ಆ ಬೆಂಕಿಯಲ್ಲಿ ಬೀಳಲು ಹೋಗುತ್ತಿದ್ದಾರೆ. ಆದುದರಿಂದ ಅವರು ಮಗುವಿನ ಹಾಗೆ. ಆ ಅರಿಯದ ಮಗುವನ್ನು ಕಾಪಾಡಬೇಕು ಎಂದರೆ ಆ ಮಾತು ಬೇರೆ. ಹಾಗಾದರೆ, ಎಲ್ಲಿ ಯಾರೇ ಅಧಮಕೃತ್ಯವನ್ನು ಮಾಡಲಿ, ನೀವು ಅವರ ಪ್ರಾಣ ತೆಗೆವ ಬದಲು ನಿಮ್ಮ ಪ್ರಾಣವನ್ನೆ ಬಲಿಕೊಡಬೇಕಾದೀತು. ಇಷ್ಟು ಪುರುಷಾರ್ಥ ಬುದ್ಧಿ ನಿಮ್ಮಲ್ಲಿದ್ದರೆ ನಿಮಗೆ ಅದರಲ್ಲಿ ಶ್ರೇಯಸ್ಸು ಸಿಗಲಿ.

■

## ಅಧ್ಯಾಯ – 17

# ನಿಷ್ಕ್ರಿಯ ಪ್ರತಿಭಟನೆ (ಸತ್ಯಾಗ್ರಹ)

**ಓದುಗ :** ನೀವು ಹೇಳುವ ಸತ್ಯಾಗ್ರಹ ಅಥವಾ ಆತ್ಮಬಲ ಸಫಲವಾದ ಐತಿಹಾಸಿಕ ಪ್ರಮಾಣ ಏನಾದರೂ ಇದೆಯೇ? ಇಂದಿನವರೆಗೆ ಈ ಆತ್ಮಬಲದಿಂದ ಯಾವ ರಾಷ್ಟ್ರವೂ ಅಭಿವೃದ್ಧಿಯಾಗಿಲ್ಲ. ಶಿಕ್ಷೆ ಮಾಡದೆ ದುಷ್ಟರು ದುರ್ಜನರು ತಮ್ಮ ದುಷ್ಟತನವನ್ನು ಬಿಟ್ಟಾರು ಎಂದು ಈಗಲೂ ನನಗನಿಸುವುದಿಲ್ಲ.

**ಸಂಪಾದಕ :** ತುಲಸೀದಾಸರು ಹೇಳಿದ್ದಾರೆ :

'ದಯೆಯೇ ಧರ್ಮದ ಮೂಲ, ಅಭಿಮಾನವೇ ಪಾಪದ ಮೂಲ'

ಇದೊಂದು ವೈಜ್ಞಾನಿಕ ಸತ್ಯ ಎನಿಸುತ್ತದೆ ನನಗೆ. ಎರಡು+ಎರಡು=ನಾಲ್ಕು, ಹೇಗೆ ಸತ್ಯವೋ ನನಗೆ ಇದೂ ಅಷ್ಟೇ ಸತ್ಯ. ದಯಾಬಲವೇ ಆತ್ಮಬಲ; ಅದೇ ಸತ್ಯಾಗ್ರಹ. ಹೆಜ್ಜೆಹೆಜ್ಜೆಗೂ ಇದರ ಪ್ರಮಾಣ ಕಂಡುಬರುತ್ತಿದೆ. ಈ ಬಲ ಇರದಿದ್ದರೆ ಭೂಮಿ ಎಂದೋ ಪಾತಾಳಕ್ಕೆ ಇಳಿಯುತ್ತಿತ್ತು. ಆದರೆ ನೀವು ಐತಿಹಾಸಿಕ ಪ್ರಮಾಣ ಕೇಳುತ್ತೀರಿ. ಇತಿಹಾಸ ಎಂದರೇನೋ ಮೊದಲು ನೋಡೋಣ. ಇತಿಹಾಸವೆಂದರೆ (ಇತಿ+ಹ+ಆಸ) ಹೀಗೆ ಇತ್ತಂತೆ, ಹೀಗೆ ನಡೆಯಿತಂತೆ ಎಂದು ಅರ್ಥ. ಇತಿಹಾಸದ ಅರ್ಥ ಇದಾದರೆ ಸತ್ಯಾಗ್ರಹದ ದೃಷ್ಟಾಂತಗಳನ್ನು ಹೇರಳವಾಗಿ ಕೊಡಬಹುದು. ರಾಜರ ಕತೆಗಳೇ ಇತಿಹಾಸ ಎಂದರೆ ಅದರಲ್ಲಿ ಸತ್ಯಾಗ್ರಹದ ಪ್ರಮಾಣ ಸಿಗಲಾರದು. ತಗಡಿನ ಗಣಿಯಲ್ಲಿ ಬೆಳ್ಳಿ ಸಿಕ್ಕೀತೇ? ನಮಗೆ ತಿಳಿದಿರುವ ಇತಿಹಾಸ, ಜಗತ್ತಿನ ಯುದ್ಧಗಳ ಕತೆ. ಅದಕ್ಕೇ ಇಂಗ್ಲಿಷರಲ್ಲಿ ಒಂದು ಗಾದೆಯಿದೆ. ಇತಿಹಾಸವಿಲ್ಲದ ದೇಶ ಸುಖದ ದೇಶ. ರಾಜರು ಹೇಗೆ ಆಟವಾಡಿದರು. ಹೇಗೆ ಪರಸ್ಪರ ಹಗೆಗಳಾದರು, ಹೇಗೆ ಒಬ್ಬರನ್ನೊಬ್ಬರು ಕೊಂದರು. ಎಂಬುದೆಲ್ಲ

ಈಗಿನ ಇತಿಹಾಸದಲ್ಲಿ ವರ್ಣಿತವಾಗಿದೆ. ಲೋಕದಲ್ಲಿ ನಡೆದುದು ಇಷ್ಟೇ ಆಗಿದ್ದರೆ ಈ ಲೋಕ ಎಂದೋ ಮುಳುಗಿ ಹೋಗುತ್ತಿತ್ತು. ಜಗತ್ತಿನ ಇತಿಹಾಸ ಯುದ್ಧದಿಂದ ಮೊದಲಾಗಿದ್ದರೆ ಇಂದು ಒಬ್ಬ ಮನುಷ್ಯನೂ ಬದುಕುತ್ತಿರಲಿಲ್ಲ. ಯುದ್ಧದಲ್ಲೇ ಮುಳುಗಿದ್ದವರು ಒಬ್ಬರೂ ಉಳಿದಿಲ್ಲ. ಆಸ್ಟ್ರೇಲಿಯಾದ ಮೂಲ ನಿವಾಸಿಗಳು ಹಾಗೆಯೇ ನಾಶವಾದರು. ಈ ನಿವಾಸಿಗಳು ಆತ್ಮರಕ್ಷಣೆಗೆ ಸತ್ಯಾಗ್ರಹವನ್ನು ಉಪಯೊಗಿಸಿಲ್ಲ ಎಂಬುದನ್ನು ನೆನಪಿನಲ್ಲಿಡಿ. ಈಗಿನ ಆಸ್ಟ್ರೇಲಿಯಾ ವಾಸಿಗಳೂ ಅದೇ ಗತಿಯನ್ನು ಕಂಡಾರು. ಅದರಲ್ಲಿ ಸಂದೇಹವಿಲ್ಲ. ಕತ್ತಿ ಹಿಡಿದವರು ಕತ್ತಿಯಿಂದಲೇ ಸಾಯುತ್ತಾರೆ. ಈಸುಗಾರರಿಗೆ ನೀರಿನಲ್ಲೇ ಮರಣ ಎಂದು ಒಂದು ಗಾದೆಯಿದೆ.

ಜಗತ್ತಿನಲ್ಲಿ ಇನ್ನೂ ಎಷ್ಟು ಕೋಟ್ಯಾಂತರ ಜನ ಇದಾರೆ ಎಂಬುದೇ ಈ ಜಗತ್ತು ಶಸ್ತ್ರಬಲದಿಂದ ನಡೆದಿಲ್ಲ. ಆತ್ಮಬಲದಿಂದ ನಡೆದಿದೆ ಎಂಬುದಕ್ಕೆ ಸಾಕ್ಷಿ. ಆತ್ಮಬಲದ ಸಫಲತೆಯ ನಿರ್ವಿವಾದ ಪ್ರಮಾಣ. ಇಷ್ಟೆಲ್ಲ ಯುದ್ಧಗಳಾದರೂ ಜಗತ್ತು ಇನ್ನೂ ಉಳಿದಿದೆ. ಬದುಕಿದೆ ಎಂಬುದಕ್ಕಿಂತ ಹೆಚ್ಚು ಏನು ಬೇಕು?

ಲಕ್ಷಾಂತರ ಜನ ಈ ಆತ್ಮಬಲವನ್ನು ನಂಬಿಯೇ ಜಗತ್ತಿನಲ್ಲಿ ಬದುಕಿದ್ದಾರೆ. ಕೋಟ್ಯಾಂತರ ಕುಟುಂಬಗಳಲ್ಲಿ ನಡೆವ ಜಗಳ ಕಚ್ಚಾಟ ಇದರ ಪ್ರಭಾವದಿಂದಲೇ ಕೊನೆಗಾಣುತ್ತವೆ. ನೂರಾರು ಜನಾಂಗ ಶಾಂತಿಯಿಂದ ಬದುಕುತ್ತಿವೆ. ನೀವು ಹೇಳುವ ಇತಿಹಾಸ ಇದನ್ನು ಗಮನಿಸದು, ಗಮನಿಸಲೂ ಆರದು. ದಯೆ, ಪ್ರೇಮಗಳ ಪ್ರವಾಹಕ್ಕೆ ಏನಾದರೂ ಅಡ್ಡಿ ಬಂದರೆ ಅದು ನಿಮ್ಮ ಇತಿಹಾಸ. ಅಣ್ಣ ತಮ್ಮಂದಿರಿಬ್ಬರು ಜಗಳವಾಡುತ್ತಾರೆ. ಅವರಲ್ಲೊಬ್ಬ ಪಶ್ಚಾತ್ತಾಪ ಪಟ್ಟು ತನ್ನೊಳಗಿದ್ದ ಪ್ರೇಮವನ್ನು ಎಚ್ಚರಗೊಳಿಸುತ್ತಾನೆ. ಇಬ್ಬರೂ ಮತ್ತೆ ಶಾಂತಿಯಿಂದ ಇರುತ್ತಾರೆ. ಇದನ್ನು ಯಾರೂ ಗಮನಿಸರು. ಅದೇ ಆ ಅಣ್ಣತಮ್ಮಂದಿರು ವಕೀಲರ ದೆಸೆಯಿಂದಲೋ ಬೇರೆ ಕಾರಣಗಳಿಂದಲೋ ಹಗೆಯನ್ನು ಬೆಳೆಸಿಕೊಂಡು ಆಯುಧ ಹಿಡಿದು ಹೊಡೆದಾಡಿದರೆ, ನ್ಯಾಯಾಲಯಕ್ಕೆ ಹೋದರೆ–ಇದೂ ಒಂದು ಪಶುಬಲದ ಬೇರೆ ರೂಪು–ಆಗ ಈ ವಿಚಾರ ಪತ್ರಿಕೆಗಳಲ್ಲಿ ಬರುತ್ತದೆ; ನೆರೆಹೊರೆಯವರು ಈ ಬಗ್ಗೆ ಮಾತಾಡಿಕೊಳ್ಳುತ್ತಾರೆ. ಇತಿಹಾಸದಲ್ಲಿಯೂ ಬರಬಹುದು. ಒಂದು ಕುಟುಂಬದ ಬಗ್ಗೆ ನಿಜವಾದುದೇ ರಾಷ್ಟ್ರಗಳ ಬಗ್ಗೆ ನಿಜ, ಕುಟುಂಬಕ್ಕೊಂದು

ನ್ಯಾಯ. ರಾಷ್ಟ್ರಕ್ಕೊಂದು ನ್ಯಾಯ. ಹೀಗಿಲ್ಲ. ಸ್ವಭಾವಕ್ಕೆ ವಿರುದ್ಧವಾದ ಅಸಹಜ ಕೃತಿಗಳ ವರದಿಯೇ ಈಗ ಇತಿಹಾಸವಾಗಿದೆ. ಸತ್ಯಾಗ್ರಹ ಸ್ವಾಭಾವಿಕ, ಆದುದರಿಂದ ಇತಿಹಾಸದಲ್ಲಿ ಅದರ ಉಲ್ಲೇಖವಿಲ್ಲ.

**ಓದುಗ** : ಸತ್ಯಾಗ್ರಹದ ಉದಾಹರಣೆ ಇತಿಹಾಸದಲ್ಲಿ ಇಲ್ಲವೆಂಬುದು ತಿಳಿಯಿತು. ಹಾಗಾದರೆ ಸತ್ಯಾಗ್ರಹವೆಂದರೇನೋ ವಿಸ್ತಾರವಾಗಿ ಅರಿಯಬೇಕು. ಸ್ವಲ್ಪ ವಿವರಿಸಿ ಹೇಳುತ್ತೀರಾ?

**ಸಂಪಾದಕ:** ಸ್ವಯಂ ಕಷ್ಟ ಸಹಿಸಿ ತಮ್ಮ ಅಧಿಕಾರಗಳನ್ನು ಗಳಿಸುವ ಪದ್ಧತಿ ಸತ್ಯಾಗ್ರಹ. ನನಗೆ ಇಷ್ಟವಿಲ್ಲದ ಕೆಲಸವನ್ನು ನಾನು ಮಾಡುವುದಿಲ್ಲ ಎಂದರೆ ಆತ್ಮಬಲವನ್ನು ಪ್ರಯೋಗಿಸಿದ ಹಾಗೆ, ಸತ್ಯಾಗ್ರಹ ಮಾಡಿದ ಹಾಗೆ. ಉದಾಹರಣೆಗಾಗಿ ಸರಕಾರ ಮಾಡಿದ ಕಾನೂನು ಒಂದು ನನಗೆ ಅನ್ವಯಿಸುತ್ತದೆ. ನನಗೆ ಆ ಕಾನೂನು ಇಷ್ಟವಿಲ್ಲ. ಸರಕಾರದ ಮೇಲೆ ಯುದ್ಧಮಾಡಿ ಆ ಕಾನೂನನ್ನು ತೆಗೆಸಿಹಾಕಿಸಿದರೆ ನಾನು ಪಶುಬಲವನ್ನು ಉಪಯೋಗಿಸಿದಂತೆ. ಆ ಕಾನೂನನ್ನು ಒಪ್ಪುವುದಿಲ್ಲವೆಂದು ಅದನ್ನು ಅಸಡ್ಡೆ ಮಾಡಿದುದಕ್ಕೆ ಶಿಕ್ಷೆ ಅನುಭವಿಸಿದರೆ ಅದು ಸತ್ಯಾಗ್ರಹ. ಇದರಲ್ಲಿ ಆತ್ಮ ಬಲಿದಾನವಿದೆ.

ಇತರರನ್ನು ಬಲಿಕೊಡುವುದೇ ಅತ್ಯಂತ ಶ್ರೇಷ್ಠವೆಂದು ಎಲ್ಲರೂ ಹೇಳುತ್ತಾರೆ. ಈ ಸತ್ಯಾಗ್ರಹವನ್ನು ಅನ್ಯಾಯವಾದುದಕ್ಕೆ ಉಪಯೋಗಿಸಿದರೆ ಹಾಗೆ ಉಪಯೋಗಿಸಿದ ವ್ಯಕ್ತಿಯೊಬ್ಬನೇ ಕಷ್ಟಪಡುತ್ತಾನೆ. ಅವನ ತಪ್ಪಿಗಾಗಿ ಇತರರು ಯಾರೂ ಕಷ್ಟಪಡರು. ಮನುಷ್ಯರು ಮಾಡುವ ಎಷ್ಟೋ ಕೆಲಸ ಆಮೇಲೆ ತಪ್ಪು ಎಂದು ತಿಳಿದುಬರುತ್ತದೆ. ನನ್ನದೇ ಸರಿ. ಅದು ತಪ್ಪು–ನನ್ನ ಅಭಿಪ್ರಾಯವೇ ಖಂಡಿತ ಎಂದು ಯಾರೂ ಹೇಳಲಾರರು. ಇಂಥದು ತಪ್ಪು ಎಂದು ಅವನ ನಿಶ್ಚಿತಾಭಿಪ್ರಾಯವಾದರೆ, ಅವನು ಅದನ್ನು ಮಾಡಬಾರದು. ಅದನ್ನು ಮಾಡದುದರಿಂದ ಬರುವ ಕಷ್ಟವನ್ನೆಲ್ಲ ಅನುಭವಿಸಬೇಕು. ಇದೇ ಸತ್ಯಾಗ್ರಹದ ಕೀಲು.

**ಓದುಗ** : ಹೀಗಾದರೆ ನೀವು ಶಾಸನಭಂಗ ಮಾಡುತ್ತೀರಿ. ಇದು ರಾಜದ್ರೋಹ. ನಾವು ಯಾವಾಗಲೂ ಶಾಸನ ಬದ್ಧ ಜನಾಂಗವೆಂದು ಹೆಸರಾಗಿದ್ದೇವೆ. ನೀವು

ಉಗ್ರವಾದಿಗಳಿಗಿಂತ ಮುಂದೆ ಹೋಗುವ ಹಾಗಿದೆ. ಕಾನೂನು ಮಾಡಿಬಿಟ್ಟ ಮೇಲೆ ಅದನ್ನು ಪಾಲಿಸಬೇಕೆಂದು ಅವರು ಹೇಳುತ್ತಾರೆ. ಕಾನೂನು ಮಾಡಿದವರನ್ನು ಹೊಡೆದೋಡಿಸಬೇಕು ಎನ್ನುತ್ತಾರೆ.

ಸಂಪಾದಕ : ಅವರಿಗಿಂತ ಮುಂದೋ ಹಿಂದೋ ಆ ಮಾತು ನಮ್ಮಿಬ್ಬರಿಗೂ ಮುಖ್ಯವಲ್ಲ. ಯಾವುದು ಸರಿ ಎಂಬುದನ್ನು ಅರಿತು, ಅದರಂತೆ ಮಾಡುವುದು ನಮ್ಮ ಉದ್ದೇಶ್ಯ. ನಾವು ಶಾಸನ ಬದ್ಧ ಜನಾಂಗ ಎಂಬುದರ ನಿಜವಾದ ಅರ್ಥ ನಾವು ಸತ್ಯಾಗ್ರಹಿಗಳು ಎಂದು. ನಮಗೆ ಕೆಲವು ಶಾಸನ ಅಸಮ್ಮತವಾದರೆ ನಾವು ಶಾಸನ ಮಾಡುವವರ ತಲೆ ಒಡೆಯುವವರಲ್ಲ; ಆ ಶಾಸನಗಳನ್ನು ಪಾಲಿಸದೆ ಅದರಿಂದ ಬರುವ ಕಷ್ಟ ಪಾಲಿಸಲೇಬೇಕೆಂಬುದು ಹೊಸ ಮಾತು, ಹಿಂದಿನ ಕಾಲದಲ್ಲಿ ಹಾಗಿರಲಿಲ್ಲ. ತಮಗೆ ಇಷ್ಟವಿಲ್ಲದ ಶಾಸನಗಳನ್ನು ಜನರು ಅಸಡ್ಡೆ ಮಾಡಿ, ಶಿಕ್ಷೆ ಅನುಭವಿಸುತ್ತಿದ್ದರು. ನಮ್ಮ ಅಂತರಾತ್ಮಕ್ಕೆ ಸಮ್ಮತವಾಗದ ಶಾಸನವನ್ನು ಪಾಲಿಸುವುದು ನಮ್ಮ ಪೌರುಷಕ್ಕೇ ವಿರುದ್ಧ, ಧರ್ಮ ವಿರುದ್ಧ. ಅದು ದಾಸ್ಯ. ಬೆತ್ತಲೆ ಕುಣಿಯಬೇಕು ಎಂದು ಸರಕಾರ ಹೇಳಿದರೆ ನಾವು ಹಾಗೆ ಮಾಡಬೇಕೆ? ನಾನು ಸತ್ಯಾಗ್ರಹಿಯಾಗಿದ್ದರೆ ನಿಮ್ಮ ಕಾನೂನು ನಿಮಗೇ ಇರಲಿ, ನಾನು ಅದನ್ನು ಪಾಲಿಸುವುದಿಲ್ಲ ಎನ್ನುತ್ತೇನೆ. ಆದರೆ ನಾವು ನಮ್ಮನ್ನೇ ಮರೆತಿದ್ದೇವೆ. ಅಸತ್ಯಾಗ್ರಹಿಗಳಾಗಿದ್ದೇವೆ. ಯಾವ ನೀಚ ಶಾಸನವನ್ನಾದರೂ ಪಾಲಿಸುತ್ತೇವೆ.

ಯಾರಿಗೆ ಮನುಷ್ಯತ್ವದ ಕಲ್ಪನೆ ಅರ್ಥವಾಗಿದೆಯೋ, ದೇವರೊಬ್ಬನಿಗೆ ಮಾತ್ರ ಯಾರು ಭಯಪಡುತ್ತಾನೆಯೋ ಅವನು ಮತ್ತಾರಿಗೂ ಹೆದರುವುದಿಲ್ಲ. ಮನುಷ್ಯ ನಿರ್ಮಿತ ಶಾಸನಗಳು ಅವನಿಗೆ ಅನಿವಾರ್ಯವಲ್ಲ. ಸರಕಾರವೂ ನಮ್ಮಿಂದ ಈ ನೀತಿ ನಿರೀಕ್ಷಿಸದು. 'ನೀವು ಹೀಗೆ ಮಾಡಲೇಬೇಕು' ಎನ್ನುವುದಿಲ್ಲ ಸರಕಾರ. 'ಹೀಗೆ ಮಾಡದಿದ್ದರೆ ಶಿಕ್ಷಿಸುತ್ತೇವೆ' ಎನ್ನುತ್ತದೆ. ನಾವು ಅಧಮಾಧಮ ಸ್ಥಿತಿಗೆ ಇಳಿದಿದ್ದೇವೆ. ಕಾನೂನು ಏನೇ ಹೇಳಲಿ ಅದನ್ನು ಮಾಡುವುದು ನಮ್ಮ ಕರ್ತವ್ಯ, ನಮ್ಮ ಧರ್ಮ ಎಂದು ತಿಳಿದಿದ್ದೇವೆ. ಅನ್ಯಾಯವಾದ ಶಾಸನವನ್ನು ಪಾಲಿಸುವುದು ಪೌರುಷಕ್ಕೆ ಹಾನಿ ಎಂಬುದನ್ನು ಅರಿತರೆ, ಅವನನ್ನು ಯಾರ ದಬ್ಬಾಳಿಕೆಯೂ ಬಂಧಿಸಲಾರದು, ಸ್ವರಾಜ್ಯಕ್ಕೆ ಇದೇ ದಾರಿ.

ಬಹು ಜನ ಹೇಳಿದುದನ್ನು ಅಲ್ಪಸಂಖ್ಯೆಯವರು ಒಪ್ಪಲೇಬೇಕೆಂಬುದು

ಬರೀ ಭ್ರಾಂತಿ, ನಾಸ್ತಿಕತೆ, ಬಹುಜನ ಸೇರಿ ಮಾಡಿದ ಕೆಲಸಗಳನೇಕ ತಪ್ಪಾಗಿವೆ; ಅಲ್ಪಸಂಖ್ಯಾತರು ಮಾಡಿದುದೇ ಸರಿಯಾಗಿವೆ. ಇಂಥ ಉದಾಹರಣೆ ಹೇರಳವಾಗಿವೆ. ಬಹುಜನಾಭಿಪ್ರಾಯಕ್ಕೆ ವಿರುದ್ಧ ನಿಂತ ಅಲ್ಪಸಂಖ್ಯೆಯವರ ಕೃತಿಗಳೇ ತಾನೆ ಸುಧಾರಣೆಗಳಿಗೆಲ್ಲ ಮೂಲ ಕಾರಣ. ಕಳ್ಳರ ಗುಂಪೊಂದರಲ್ಲಿ ಚೋರ ವಿದ್ಯೆಯ ಜ್ಞಾನ ಅಗತ್ಯ ಎಂಬ ನಿಯಮವಿರಬಹುದು. ಅದನ್ನು ಸಜ್ಜನರು ಒಪ್ಪಲು ಸಾಧ್ಯವೆ? ಅನ್ಯಾಯವಾದ ಶಾಸನಗಳನ್ನು ಮನುಷ್ಯ ಪಾಲಿಸಬೇಕೆಂಬ ಭ್ರಾಂತಿಯಿರುವವರೆಗೆ ದಾಸ್ಯವೂ ತಪ್ಪಿದ್ದಲ್ಲ. ಇದ್ದೇ ಇರುತ್ತದೆ. ಸತ್ಯಾಗ್ರಹಿಯೊಬ್ಬನೇ ಅದನ್ನು ದೂರ ಮಾಡಬಲ್ಲವನು.

ಪಶುಬಲವನ್ನು, ಮದ್ದುಗುಂಡನ್ನು ಉಪಯೋಗಿಸುವುದು ಸತ್ಯಾಗ್ರಹಕ್ಕೆ ವಿರುದ್ಧ. ನಮಗೆ ಒಂದು ನಷ್ಟ ವಿರೋಧಿಗೆ ಇಷ್ಟವಿಲ್ಲ ಅವನಿಗೆ ಇಷ್ಟವಿಲ್ಲದಿದ್ದರೂ ಅದನ್ನು ಬಲಾತ್ಕಾರವಾಗಿ ಮಾಡಿಸುವುದು ಪಶುಬಲದ ಉದ್ದೇಶ. ನಾವು ಹಾಗೆ ಬಲಾತ್ಕಾರ ಮಾಡುವುದು ಸರಿಯೆಂದರೆ ಅವನೂ ನಮ್ಮ ಮೇಲೆ ಬಲವನ್ನು ಪ್ರಯೋಗಿಸುವುದು ಸರಿ. ಇದರಿಂದ ಏಕಾಭಿಪ್ರಾಯ ಸಾಧ್ಯವಾಗುವುದೇ ಇಲ್ಲ. ನಾವೂ ಪ್ರಗತಿ ಹೊಂದಿದ್ದೇವೆ ಎಂದು ತಿಳಿದುಕೊಳ್ಳಬಹುದು. ಆದರೆ ಗಾಣದೆತ್ತು ಎಷ್ಟು ಸುತ್ತಿದರೂ ಇದ್ದಲ್ಲಿಯೇ ಇರುತ್ತದೆ; ನಾವೂ ಅಷ್ಟೆ. ತಮ್ಮ ಅಂತರಾತ್ಮಕ್ಕೆ ವಿರುದ್ಧವಾದ ಶಾಸನಗಳನ್ನು ಪಾಲಿಸಬಾರದು ಎಂಬವರಿಗೆ ಇರುವ ಮಾರ್ಗ–ಸತ್ಯಾಗ್ರಹವೊಂದೇ. ಬೇರೆ ಯಾವ ದಾರಿಯಾದರೂ ಸರ್ವನಾಶ ಖಂಡಿತ.

**ಓದುಗ :** ನೀವು ಹೇಳಿದುದನ್ನೆಲ್ಲ ಕೇಳಿದರೆ ಈ ಸತ್ಯಾಗ್ರಹ ಬಲಹೀನರಿಗೆ ಉತ್ತಮ ಸಾಧನ; ಬಲಿಷ್ಠರಾದಾಗ ಶಸ್ತ್ರವೇ ಸರಿ ಎನಿಸುತ್ತದೆ.

**ಸಂಪಾದಕ :** ಇದರಂಥ ಅಜ್ಞಾನ ಬೇರೆ ಇಲ್ಲ. ಸತ್ಯಾಗ್ರಹ ಅಪ್ರತಿಮವಾದುದು, ಶಸ್ತ್ರಬಲಕ್ಕಿಂತ ಅಧಿಕ ಸಮರ್ಥವಾದುದು. ಅದನ್ನು ಬಲಹೀನರ ಆಯುಧ ಎನ್ನಬಹುದೇ? ಸತ್ಯಾಗ್ರಹಕ್ಕೆ ಅಗತ್ಯವಾದ ಸಾಹಸ ಶಸ್ತ್ರಬಲದವರಲ್ಲಿ ಇರುವುದಿಲ್ಲ. ಹೇಡಿಯಾದವನು ತನಗೆ ಇಷ್ಟವಿಲ್ಲದ ಶಾಸನವನ್ನು ಮುರಿಯಬಲ್ಲನೆ? ಅದು ಸಂಭವವೆ? ಉಗ್ರಪಂಥಿಗಳು ಮಾತಾಡುತ್ತಾರೆ. ನಾನು ಅವರನ್ನು ನಿಂದಿಸುವುದಿಲ್ಲ. ಅವರು ಬೇರೇನು ಹೇಳಬಲ್ಲರು? ಇಂಗ್ಲಿಷರನ್ನು ಓಡಿಸಿ, ತಾವು ಪ್ರಭುಗಳಾದಾಗ ನಾನು ನೀವು ಅವರ ಶಾಸನಗಳನ್ನು ಪಾಲಿಸಬೇಕೆಂಬುದೇ ಅವರ ಅಭಿಪ್ರಾಯ.

ಅವರ ಲೆಕ್ಕದಂತೆ ಅದು ಸರಿ. ಅದರೆ ತನ್ನ ಅಂತರಾತ್ಮಕ್ಕೆ ವಿರುದ್ಧವಾದ ಶಾಸನವನ್ನು ಗುಂಡಿನ ಬಾಯಿಗಿಟ್ಟರೂ ಸರಿಯೆ, ಪಾಲಿಸುವುದು ಸಾಧ್ಯವಿಲ್ಲ ಎಂದು ಸತ್ಯಾಗ್ರಹಿ ಹೇಳಿಯಾನು.

ನೀವೇನು ತಿಳಿದಿದ್ದೀರಿ? ಗುಂಡು ಹಾರಿಸಿ ನೂರಾರು ಜನರನ್ನು ಕೊಲ್ಲುವುದು ಶೌರ್ಯವೋ, ನಗುನಗುತ್ತ ಗುಂಡಿನ ಬಾಯಿಗೆ ಇದಿರಾಗಿ ನಿಂತು ಸಾಯುವುದು ಶೌರ್ಯವೋ? ಪ್ರಾಣವನ್ನು ಸದಾ ಅಂಗೈಯಲ್ಲಿಟ್ಟುಕೊಂಡು ಸಾವಿಗೆ ಅಂಜದವನು ರಣಧೀರನೋ, ಇತರರ ಪ್ರಾಣವನ್ನು ಹಿಸುಕಿ ಹಾಕಬಲ್ಲವನೋ? ಪೌರುಷ ಹೀನನೂ ಧೈರ್ಯಹೀನನೂ ಎಂದಿಗೂ ಸತ್ಯಾಗ್ರಹಿಯಾಗಲಾರ.

ಒಂದು ಮಾತನ್ನು ಒಪ್ಪಿಕೊಳ್ಳುತ್ತೇನೆ. ದುರ್ಬಲ ಶರೀರಿಯೂ ಕೂಡ ಸತ್ಯಾಗ್ರಹ ಮಾಡಬಲ್ಲ. ಒಬ್ಬನೇ ಸತ್ಯಾಗ್ರಹ ಮಾಡಬಲ್ಲ. ಲಕ್ಷಾಂತರ ಜನವೂ ಮಾಡಬಲ್ಲರು. ಗಂಡಸರು, ಹೆಂಗಸರು ಕೂಡ ಸತ್ಯಾಗ್ರಹಿಗಳಾಗಬಲ್ಲರು. ಇದಕ್ಕೆ ದಂಡು ಕಟ್ಟಬೇಕಾಗಿಲ್ಲ. ಕವಾಯತು ಕಲಿಸಬೇಕಾಗಿಲ್ಲ. ಗರಡಿ ಸಾಧನೆ ಬೇಕಾಗಿಲ್ಲ. ಮನೋನಿಗ್ರಹವೊಂದಿದ್ದರೆ ಸಾಕು. ಯಾರಿಗೆ ಮನಸ್ಸು ಅಧೀನವೋ ಅವನು ವನರಾಜ ಸಿಂಹದಂತೆ ನಿರ್ಭಯನಾಗುತ್ತಾನೆ. ಅವನ ನೋಟದಿಂದಲೇ ವೈರಿಯ ಗರ್ಭ ನಿರ್ಭೇದವಾಗುತ್ತದೆ.

ಸತ್ಯಾಗ್ರಹ ಖಡ್ಗಕ್ಕೆ ಎತ್ತಲೂ ಅಲಗೇ; ಹೇಗೆ ಬೇಕಾದರೂ ಪ್ರಯೋಗಿಸ ಬಹುದು. ಅದರಿಂದ ಸತ್ಯಾಗ್ರಹ ಮಾಡಿದವನಿಗೂ ಶುಭ; ಯಾರ ವಿರುದ್ಧ ಸತ್ಯಾಗ್ರಹ ನಡೆಯಿತೋ ಅವನಿಗೂ ಶುಭ–ಇಬ್ಬರಿಗೂ ಶುಭ. ಒಂದು ತೊಟ್ಟು ರಕ್ತವನ್ನೂ ಸುರಿಸದೆಯೇ ಗಂಭೀರ ಪರಿಣಾಮವನ್ನು ಮಾಡುತ್ತದೆ. ಅದಕ್ಕೆ ತುಕ್ಕು ಹಿಡಿಯದು, ಅದನ್ನು ಯಾರೂ ಕದಿಯಲಾರರು. ಸತ್ಯಾಗ್ರಹಿಗಳು ಪೋಟಿ ಮಾಡಿದರೆ ಯಾರಿಗೂ ದಣಿವಾಗದು. ಸತ್ಯಾಗ್ರಹದ ಕತ್ತಿಗೆ ಒರೆಯೂ ಬೇಕಿಲ್ಲ. ಇಂಥ ಅದ್ಭುತ ಆಯುಧವನ್ನು ಬಲಹೀನರ ಆಯುಧ ಎನ್ನುತ್ತೀರಲ್ಲ? ಎಷ್ಟು ವಿಚಿತ್ರ!

ಓದುಗ : ನೀವು ಹೇಳುವ ಪ್ರಕಾರ ಸತ್ಯಾಗ್ರಹ ಹಿಂದೂಸ್ಥಾನದ ವೈಶಿಷ್ಟ್ಯ. ಹಾಗಾದರೆ ಹಿಂದೂಸ್ಥಾನದಲ್ಲಿ ಯಾವಾಗಲೂ ಗುಂಡುಮದ್ದು ಉಪಯೋಗಿಸಲಿಲ್ಲವೇ?

**ಸಂಪಾದಕ:** ನಿಮ್ಮ ಮನಸ್ಸಿನಲ್ಲಿ ಹಿಂದೂಸ್ಥಾನವೆಂದರೆ ಕೆಲವರು ರಾಜಮಹಾರಾಜರು ಎಂದಿದೆ. ನನಗೋ, ಹಿಂದೂಸ್ಥಾನವೆಂದರೆ ಈ ಕೋಟಿ ಕೋಟಿ ರೈತರು : ಈ ರಾಜಾಧಿರಾಜರ ಬದುಕು ಯಾರನ್ನು ಅವಲಂಬಿಸಿದೆಯೋ ಆ ಪ್ರಜಾ ಸಮೂಹ.

ರಾಜರು ಸದಾ ಶಸ್ತ್ರಗಳನ್ನು ಪ್ರಯೋಗಿಸಿ ತೀರುತ್ತಾರೆ. ಬಲ ಪ್ರಯೋಗ ಅವರ ಹುಟ್ಟುಗುಣ. ಅವರು ಪ್ರಭುತ್ವ ನಡೆಸಬೇಕಲ್ಲ. ಆದರೆ ಪ್ರಜೆಗೆ ಗುಂಡು ಮದ್ದು ಬೇಡ. ಈ ಪ್ರಜೆಯದೆ ಲೋಕದಲ್ಲಿ ಬಹು ಸಂಖ್ಯೆ. ಶಸ್ತ್ರಬಲವೋ ಆತ್ಮಬಲವೋ ಯಾವುದಾದರೂ ಒಂದು ಅವರಿಗೆ ಬೇಕು. ಶಸ್ತ್ರಬಲವನ್ನು ಕಲಿತರೆ ರಾಜ–ಪ್ರಜೆ ಇಬ್ಬರೂ ಹುಚ್ಚರ ಹಾಗೆ ಆಗುತ್ತಾರೆ. ಪ್ರಜೆ ಆತ್ಮಬಲವನ್ನು ಕಲಿತರೆ, ಸತ್ಯಾಗ್ರಹವನ್ನು ಕಲಿತರೆ, ರಾಜರ ಪ್ರಭುತ್ವ ಅವರ ಕತ್ತಿಯ ಅಲಗನ್ನು ದಾಟಲಾರದು. ಧೀರಪುರುಷರು, ನಿಜವಾದ ಮನುಷ್ಯರು ಅನ್ಯಾಯದ ಅಪ್ಪಣೆಗಳನ್ನು ಸಡ್ಡೆಮಾಡರು. ರೈತರನ್ನು ಎಂದೂ ಯಾರೂ ಕತ್ತಿಯಿಂದ ಅಧೀನಪಡಿಸಿಕೊಂಡಿಲ್ಲ. ಮುಂದೆಯೂ ಅಷ್ಟೆ. ಅವರಿಗೆ ಕತ್ತಿ ಹಿಡಿದು ಗೊತ್ತಿಲ್ಲ. ಕತ್ತಿ ಹಿಡಿದವರನ್ನು ಕಂಡು ಭಯವೂ ಇಲ್ಲ. ಸಾವಿನ ತೊಡೆಯ ಮೇಲೆ ಸದಾ ಮಲಗಿರಬಲ್ಲ ರಾಷ್ಟ್ರವೇ ಮಹಾ ರಾಷ್ಟ್ರ. ಯಾರಿಗೆ ಮರಣ ಭಯವಿಲ್ಲವೋ ಅವರಿಗೆ ಯಾವ ಭಯವೂ ಇಲ್ಲ. ಶಸ್ತ್ರಬಲದ ಮೋಹಕ್ಕೆ ಸಿಲುಕಿದವರಿಗೆ ಈ ಚಿತ್ರ ಉತ್ಪ್ರೇಕ್ಷಿತವೇನಲ್ಲ. ಹಿಂದೂಸ್ಥಾನದ ಪ್ರಜೆ ಜೀವನದ ಸರ್ವಾಂಗಗಳಲ್ಲಿಯೂ ಸತ್ಯಾಗ್ರಹವನ್ನು ಪ್ರಯೋಗಿಸಿದ್ದಾರೆ. ಇದು ನಿಜ. ಆಳುವವರು ದುಷ್ಟರಾದರೆ ಪ್ರಜೆ ಅವರೊಡನೆ ಸಹಕಾರ ಮಾಡದೆ ಬಿಡುತ್ತದೆ. ಇದೇ ಸತ್ಯಾಗ್ರಹ.

ಈ ಸಂದರ್ಭದಲ್ಲಿ ಒಂದು ಸಂಗತಿ ನೆನಪಾಗುತ್ತದೆ. ಒಂದು ಸಂಸ್ಥಾನದಲ್ಲಿ ದೊರೆ ಜನರಿಗಿಷ್ಟವಿಲ್ಲದ ಒಂದು ಅಪ್ಪಣೆ ಮಾಡಿದ, ಜನರು ಕೂಡಲೇ ತಮ್ಮ ಹಳ್ಳಿಯನ್ನು ಬಿಟ್ಟು ಹೊರಟು ಹೋಗಲು ಮೊದಲಿಟ್ಟರು. ಆಗ ಆ ದೊರೆ ಗಾಬರಿಗೊಂಡು ಜನರನ್ನು ಕ್ಷಮೆ ಬೇಡಿ ತನ್ನ ಅಪ್ಪಣೆಯನ್ನು ಹಿಂದಕ್ಕೆ ತೆಗೆದುಕೊಂಡ. ಹಿಂದೂಸ್ಥಾನದಲ್ಲಿ ಇಂಥ ಘಟನೆ ಅನೇಕ ಆಗಿವೆ. ಎಲ್ಲಿ ಸತ್ಯಾಗ್ರಹವೇ ಪ್ರಜೆಗಳಿಗೆ ಊರೆಗೋಲೋ ಅಲ್ಲಿ ನಿಜವಾದ ಸ್ವರಾಜ್ಯ ಸಂಭವ. ಉಳಿದುದೆಲ್ಲ ಸ್ವರಾಜ್ಯವಲ್ಲ ಪರರಾಜ್ಯ.

ಓದುಗ : ಹಾಗಾದರೆ ಶರೀರ ಶಿಕ್ಷಣ ಅಗತ್ಯವೇ ಇಲ್ಲ ಎನ್ನುತ್ತೀರಾ?

ಸಂಪಾದಕ : ಹಾಗೆಂದಿಗೂ ಹೇಳುವುದಿಲ್ಲ. ಶರೀರ ದೃಢವಾಗದಿದ್ದರೆ ಸತ್ಯಾಗ್ರಹಿಯಾಗುವುದು ಕಷ್ಟ. ಭೋಗವಿಲಾಸದಲ್ಲಿ ಮುಳುಗಿ ದೇಹವನ್ನು ದುರ್ಬಲಗೊಳಿಸಿಕೊಂಡವನ ಮನಸ್ಸು ದುರ್ಬಲವಾಗಿಯೇ ಇರುತ್ತದೆ. ಮನೋಬಲ ಇಲ್ಲದವನಿಗೆ ಆತ್ಮಬಲವೆಲ್ಲಿಂದ ಬಂದೀತು? ಬಾಲವಿವಾಹ, ವಿಲಾಸಜೀವನ ಮುಂತಾದವುಗಳನ್ನು ಬಿಟ್ಟು ನಮ್ಮ ಶರೀರವನ್ನು ನಾವು ಸುದೃಢವಾಗಿಸಬೇಕು. ಜರ್ಜರಿತ ದೇಹಿಯೊಬ್ಬನನ್ನು ಗುಂಡಿನ ಬಾಯಿಗೆ ಇದಿರಾಗಿ ನಿಲ್ಲು ಎಂದು ಹೇಳಿದರೆ ನನ್ನನ್ನು ನೋಡಿ ಎಲ್ಲರೂ ನಕ್ಕಾರು.

ಓದುಗ: ನೀವು ಹೇಳುವುದನ್ನು ಕೇಳಿದರೆ ಸತ್ಯಾಗ್ರಹಿಯಾಗುವುದು ಸಾಮಾನ್ಯವಲ್ಲ ಎನಿಸುತ್ತದೆ. ಹಾಗಾದರೆ ಸತ್ಯಾಗ್ರಹಿಯಾಗುವುದು ಹೇಗೆ? ಹೇಳಿ.

ಸಂಪಾದಕ : ಸತ್ಯಾಗ್ರಹಿಯಾಗುವುದು ಬಹಳ ಸುಲಭ; ಬಹಳ ಕಷ್ಟವೂ ಹೌದು. ಹದಿನಾಲ್ಕು ವರ್ಷದ ಹುಡುಗ ಒಬ್ಬ ಸತ್ಯಾಗ್ರಹಿಯಾದುದನ್ನು ನಾನು ನೋಡಿದ್ದೇನೆ. ರೋಗಿಗಳು ಸತ್ಯಾಗ್ರಹ ಮಾಡಿದುದನ್ನು ಬಲ್ಲೆ. ಗಟ್ಟಿಮುಟ್ಟಾಗಿ ಸುಖವಾಗಿ ಇರುವ ಜನ ಸತ್ಯಾಗ್ರಹ ಮಾಡಲಾರದುದನ್ನೂ ನೋಡಿದ್ದೇನೆ. ದೇಶಕ್ಕಾಗಿ ಸತ್ಯಾಗ್ರಹಿಗಳಾಗ ಬಯಸುವವರು ಬ್ರಹ್ಮಚರ್ಯೆ ನಡೆಸಬೇಕು. ಬಡತನದ ವ್ರತ ತೊಡಬೇಕು. ಸತ್ಯೋಪಾಸನೆ ಮಾಡಬೇಕು. ನಿರ್ಭಯರಾಗಬೇಕು ಎಂಬು ದನ್ನು ಬಹಳ ಕಾಲದ ಅನುಭವದಿಂದ ನಾನು ಅರಿತುಕೊಂಡಿದ್ದೇನೆ.

ಬ್ರಹ್ಮಚರ್ಯ ಒಂದು ಮಹಾವ್ರತ, ಅದರ ಹೊರತು ಮನಸ್ಸು ದೃಢವಾಗ ಲಾರದು. ಬ್ರಹ್ಮಚಾರಿಯಲ್ಲದವನು ಭ್ರಷ್ಟವೀರ್ಯನಾಗಿ ದುರ್ಬಲ, ಹೇಡಿ ಆಗುತ್ತಾನೆ. ವಿಷಯ ವಾಸನೆಯಲ್ಲಿ ಮುಳುಗಿದ ಮನಸ್ಸು ಯಾವ ಮಹಾಕಾರ್ಯ ವನ್ನೂ ಸಾಧಿಸಲಾರದು. ಇದಕ್ಕೆ ಅಸಂಖ್ಯ ಉದಾಹರಣೆಗಳಿವೆ. ಹಾಗಾದರೆ ಮದುವೆಯಾದ ಗೃಹಸ್ಥ ಏನು ಮಾಡಬೇಕು ಎಂಬ ಪ್ರಶ್ನೆ ಸಹಜವಾಗಿಯೇ ಬರುತ್ತದೆ.

ಆದರೆ ಈ ಪ್ರಶ್ನೆ ಅಗತ್ಯವಿಲ್ಲ. ಗಂಡ ಹೆಂಡತಿಯೇ ಆದರೂ ಅವರ ಸಮಾಗಮ ವಿಷಯ ಭೋಗಕ್ಕಾದರೆ ಅದು ಪಶುವೃತ್ತಿಯೇ, ಸಂತಾನೋತ್ಪತ್ತಿಗೆ

ಮಾತ್ರ ಪತಿಪತ್ನಿ ಸಮಾಗಮ; ಅನ್ಯಥಾ ನಿಷಿದ್ಧ, ಸತ್ಯಾಗ್ರಹಿಗೆ ಸಂತಾನೇಚ್ಛೆ ಇಲ್ಲ. ಆದುದರಿಂದ ಈ ಪರಿಮಿತ ಭೋಗವೂ ಅವನಿಗೆ ಸಲ್ಲದು. ಈ ರೀತಿ ಗೃಹಸ್ಥನೂ ಸಹ ಬ್ರಹ್ಮಚರ್ಯ ಪಾಲನೆ ಮಾಡಬಹುದು. ಈ ಮಾತನ್ನು ಹೆಚ್ಚು ವಿವರವಾಗಿ ಬರೆಯುವಂತಿಲ್ಲ. ಇದರಲ್ಲಿ ಹಲವು ಪ್ರಶ್ನೆ ಹುಟ್ಟುತ್ತವೆ; ಹೆಂಡತಿಯ ವಿಚಾರವೇನು ಆಕೆಯ ಅಧಿಕಾರ ಎಷ್ಟು, ಆಕೆಯನ್ನು ಹೇಗೆ ಒಪ್ಪಿಸುವುದು ಇತ್ಯಾದಿ. ಆದರೂ ಈ ಮಹಾಕಾರ್ಯದಲ್ಲಿ ತೊಡಗುವವರು ಈ ಪ್ರಶ್ನೆಗಳನ್ನು ಪರಿಹರಿಸಬೇಕು.

ಬ್ರಹ್ಮಚರ್ಯದ ಹಾಗೆಯೇ ಬಡತನದ ವ್ರತವೂ ಅಗತ್ಯ. ಹಣದಾಸೆ, ಸತ್ಯಾಗ್ರಹ ಎರಡೂ ಒಟ್ಟಿಗೆ ಇರಲಾರವು. ಹಣವಿದ್ದವರು ಅದರ ಬಗ್ಗೆ ಉದಾಸೀನ ವಾಗಿರಬೇಕು. ಸತ್ಯಾಗ್ರಹ ಮಾಡುವಾಗ ತಮ್ಮ ಹಣವೆಲ್ಲ ಹೋದರೂ ಸತ್ಯಾಗ್ರಹವನ್ನು ಬಿಡಬಾರದು.

ಸತ್ಯಾಗ್ರಹವನ್ನು ಸತ್ಯಬಲ ಎಂದು ಮಾತಿನ ನಡುವೆ ಹೇಳಿದೆ. ಸತ್ಯೋಪಾಸನೆ ಇಲ್ಲದ ಸತ್ಯಬಲವೆಲ್ಲಿ? ಅದುದರಿಂದ ಏನೇ ಬರಲಿ. ಸತ್ಯವಾಗಿ ನಡೆಯಲೇಬೇಕು. ಒಬ್ಬರ ಪ್ರಾಣ ಉಳಿಸಲು ಸುಳ್ಳು ಹೇಳಬಹುದೇ. ಬೇಡವೇ ಇತ್ಯಾದಿ ಪ್ರಶ್ನೆ ಈ ಸಂದರ್ಭದಲ್ಲಿ ಬರುವುದುಂಟು, ಸುಳ್ಳು ಹೇಳುವುದನ್ನು ಸಮರ್ಥಿಸುವವರಿಗೇ ಈ ಪ್ರಶ್ನೆ ತೋಚುತ್ತದೆ. ಸತ್ಯವನ್ನೇ ಸದಾ ಪಾಲಿಸಬೇಕೆನ್ನುವವರಿಗೆ ಇಂಥ ಧರ್ಮಸಂಕಟ ಬರುವುದೇ ಇಲ್ಲ; ಬಂದರೂ ಅವನಿಗೆ ಅದರಿಂದ ಹಾನಿ ಯಾಗುವುದಿಲ್ಲ.

ನಿರ್ಭಯತೆಯಿಲ್ಲದೆ ಸತ್ಯಾಗ್ರಹಿ ಒಂದು ಹೆಜ್ಜೆಯನ್ನಾದರೂ ಮುಂದಿಡಲಾರ. ಪೂರ್ಣ ನಿರ್ಭಯನಾದವನೇ–ಮಾನಾವಮಾನ ಲಾಭನಷ್ಟ, ಬಂಧುಬಳಗ, ಸರಕಾರ, ಆಘಾತ, ಮರಣ ಯಾವ ಭಯವೂ ಇಲ್ಲದವನೇ ಸತ್ಯಾಗ್ರಹದ ದಾರಿಯಲ್ಲಿ ನಡೆಯಬಲ್ಲ.

ಇವೆಲ್ಲವನ್ನೂ ಕಷ್ಟವೆಂದು ಬಿಡಬೇಕಾಗಿಲ್ಲ. ಏನೇ ಕಷ್ಟ ಬಂದೊದಗಿದರೂ ಅದನ್ನು ಸೈರಿಸಿಕೊಳ್ಳುವ ಶಕ್ತಿಯನ್ನು ದೇವರು ಮನುಷ್ಯ ಮಾತ್ರನಿಗೆ ಕೊಟ್ಟಿದ್ದಾನೆ. ದೇಶಸೇವೆಯ ವಿಶೇಷ ಇಚ್ಛೆಯಿಲ್ಲದಿದ್ದರೂ

ಈ ಗುಣಗಳನ್ನು ಕಲಿಯುವುದು ಒಳ್ಳೆಯದು. ಶಸ್ತ್ರಬಲವಾದಿಗಳೂ ಹೆಚ್ಚು ಕಡಿಮೆ ಇದೇ ಗುಣಗಳನ್ನು ಕಲಿಯು ಬೇಕಾಗುತ್ತದೆ. ಮರೆಯಬಾರದು. ಬಯಸಿದ ಮಾತ್ರಕ್ಕೇ ಯಾರೂ ಯೋಧ ರಾಗುವುದಿಲ್ಲ. ಯೋಧರಾಗುವವರು ಬ್ರಹ್ಮಚರ್ಯ ಪಾಲನೆ ಮಾಡಬೇಕು. ಬಡತನದಲ್ಲಿಯೇ ತೃಪ್ತಿಗೊಳ್ಳಬೇಕು. ನಿರ್ಭಯನಲ್ಲದವನಂತೂ ಯೋಧನಾಗಲೇ ಆರ. ಅವನಿಗೆ ಸತ್ಯವಂತಿಕೆಯೇನು ಅಗತ್ಯವಿಲ್ಲವೆಂಬ ಭಾವನೆ ಇರಬಹುದು. ಆದರೆ ನಿರ್ಭೀತನಿಗೆ ಸತ್ಯವಂತಿಕೆ ಸಹಜವಾಗಿಯೆ ಬರುತ್ತದೆ. ಏನಾದರೂ ಭಯದಿಂದಲೆ ತಾನೆ ಮನುಷ್ಯ ಸತ್ಯವನ್ನು ಬಿಡುವುದು? ಆದುದರಿಂದ ಈ ನಾಲ್ಕು ಗುಣಗಳಿಗೂ ಯಾರೂ ಹೆದರಬೇಕಾಗಿಲ್ಲ. ಇನ್ನು ಒಂದು ಮಾತು; ಶಸ್ತ್ರಧಾರಿ ಇನ್ನೂ ಕೆಲವು ನಿಷ್ಪ್ರಯೋಜಕ ಗುಣಗಳನ್ನು ಅಭ್ಯಾಸ ಮಾಡಿಕೊಳ್ಳಬೇಕು. ಅವು ಸತ್ಯಾಗ್ರಹಿಗೆ ಅಗತ್ಯವಿಲ್ಲ. ಶಸ್ತ್ರಧಾರಿಗೆ ಬೇಕಾಗುವ ಇತರ ಗುಣಗಳೆಲ್ಲ ಅವನು ನಿರ್ಭಯನಲ್ಲದಿದ್ದರೆ ಬೇಕಾಗುತ್ತದೆ. ನಿಜವಾಗಿಯೂ ಅವನು ನಿರ್ಭಯನೇ ಆಗಿದ್ದರೆ ಅವನ ಕೈಯಿಂದ ಕತ್ತಿ ಆ ಗಳಿಗೆಯಲ್ಲಿಯೆ ಜಾರಿ ಬೀಳುತ್ತದೆ. ಅವನಿಗೆ ಅದರ ಬಲ ಬೇಕಿಲ್ಲ. ಯಾರಿಗೆ ದ್ವೇಷವೆಂಬುದಿಲ್ಲವೋ ಅವನಿಗೆ ಕತ್ತಿಯೇಕೆ? ಒಬ್ಬ ಮನುಷ್ಯನ ಕೈಯಲ್ಲಿ ಒಂದು ದೊಣ್ಣೆಯಿತ್ತು. ಅವನ ಇದಿರಿಗೆ ಒಂದು ಸಿಂಹ ತಟ್ಟನೆ ಬಂದಾಗ ಅವನು ದೊಣ್ಣೆಯೆತ್ತಿದ. ಆಗ ಅವನಿಗೆ ತಿಳಿಯಿತು. ತನ್ನ ನಿರ್ಭಯತೆಯ ಜಂಬವೆಲ್ಲ ಬರೀ ಬಡಾಯಿ. ಕೂಡಲೇ ಅವನು ಆ ದೊಣ್ಣೆಯನ್ನು ಕೆಳಗೆ ಬಿಸುಟು ಪೂರ್ಣ ನಿರ್ಭಯನಾದ.



# ಅಧ್ಯಾಯ – ೧೮

# ಶಿಕ್ಷಣ

**ಓದುಗ :** ಇಷ್ಟೆಲ್ಲ ಹೇಳಿದಿರಿ. ಶಿಕ್ಷಣದ ಅಗತ್ಯವನ್ನು ಕುರಿತು ನೀವು ಹೇಳಲೇ ಇಲ್ಲ. ನಾವು ನಮ್ಮಲ್ಲಿ ಶಿಕ್ಷಣ ಇಲ್ಲ ಎಂದು ಸದಾ ಗೊಣಗುತ್ತಲೇ ಇರುತ್ತೇವೆ. ಬಲಾತ್ಕಾರ ಶಿಕ್ಷಣದ ಚಳವಳಿ ಒಂದು ಪ್ರಾರಂಭವಾಗಿದೆ. ಬರೋಡಾದ ಮಹಾರಾಜರು ತಮ್ಮ ದೇಶದಲ್ಲಿ ಅದನ್ನು ತಂದಿದ್ದಾರೆ. ಎಲ್ಲರ ಕಣ್ಣು ಅತ್ತಕಡೆಯೇ ಇದೆ. ಆ ಮಹಾರಾಜರಿಗೆ ಎಲ್ಲರೂ ಧನ್ಯವಾದ ಕೊಡುತ್ತಿದ್ದೇವೆ. ಈ ಪ್ರಯತ್ನ ವೆಲ್ಲವೂ ವ್ಯರ್ಥ ಎನ್ನಬೇಕೆ?

**ಸಂಪಾದಕ :** ನಮ್ಮ ಸಭ್ಯತೆ ಸರ್ವೋತ್ತಮವಾದುದು ಎಂದು ಒಪ್ಪಿದರೆ, ಈ ಪ್ರಯತ್ನಗಳೆಲ್ಲ ಬಹುಮಟ್ಟಿಗೆ ವ್ಯರ್ಥವೆಂದೇ ಖೇದದಿಂದ ಹೇಳಬೇಕಾಗುತ್ತದೆ. ಮಹಾರಾಜರ ಉದ್ದೇಶ್ಯ ಇತರ ನಾಯಕರ ಪ್ರಯತ್ನ ಎಲ್ಲರೂ ಶುದ್ಧ. ನಿರ್ಮಲ–ಅದಕ್ಕಾಗಿ ಅವರನ್ನು ವಂದಿಸಬೇಕು. ಆದರೆ ಅವರ ಈ ಪ್ರಯತ್ನದಿಂದ ಆಗುವ ಪರಿಣಾಮದ ಬಗ್ಗೆ ಕಣ್ಣುಮುಚ್ಚಿಕೊಳ್ಳಲು ಆಗುತ್ತದೆಯೇ?

ಶಿಕ್ಷಣ ಎಂದರೇನು? ಕೇವಲ ಅಕ್ಷರಜ್ಞಾನ ಎಂದರೆ ಅದೊಂದು ಆಯುಧ ವಾಯಿತು. ಆಯುಧವನ್ನು ಸದುಪಯೋಗ ಮಾಡಲೂಬಹುದು. ದುರುಪಯೋಗ ಮಾಡಲೂಬಹುದು. ಒಂದೇ ಆಯುಧದಿಂದ ರೋಗಿಯನ್ನು ವಾಸಿ ಮಾಡಲೂ ಬಹುದು. ಕೊಂದು ಹಾಕಲೂಬಹುದು. ಅಕ್ಷರಜ್ಞಾನವೂ ಅದೇ ರೀತಿ. ಅಕ್ಷರಜ್ಞಾನದ ದುರುಪಯೋಗ ಆಗುತ್ತಿರುವುದನ್ನು ದಿನವೂ ನಾವು ನೋಡುತ್ತಿದ್ದೇವೆ. ಕೆಲವರು ಮಾತ್ರ ಅದರ ಸದುಪಯೋಗ ಮಾಡುತ್ತಿದ್ದಾರೆ. ಈ ಮಾತು ನಿಜವಾದರೆ ಅಕ್ಷರಜ್ಞಾನದಿಂದ ಲಾಭಕ್ಕಿಂತ ನಷ್ಟವೇ ಹೆಚ್ಚಾಯಿತು ಎಂಬುದು ಸಿದ್ಧವಾಗುತ್ತದೆ.

ಶಿಕ್ಷಣವೆಂದರೆ ಸಾಧಾರಣವಾಗಿ ಅಕ್ಷರಜ್ಞಾನ ಎನ್ನುತ್ತಾರೆ. ಮಕ್ಕಳಿಗೆ ಓದು ಬರಹ ಅಂಕಗಣಿತಗಳನ್ನು ಕಲಿಸುವುದೇ ಪ್ರಾಥಮಿಕ ಶಿಕ್ಷಣ. ಒಬ್ಬ ರೈತ ಪ್ರಾಮಾಣಿಕತೆಯಿಂದ ತನ್ನ ಹಿಟ್ಟನ್ನು ಗಳಿಸುತ್ತಾನೆ. ಅವನಿಗೆ ಸಾಮಾನ್ಯ ಲೋಕಜ್ಞಾನವಿದೆ. ತನ್ನ ತಂದೆ ತಾಯಿಯ ಸಂಗಡ, ಹೆಂಡತಿ ಮಕ್ಕಳ ಸಂಗಡ ಗ್ರಾಮವಾಸಿಗಳ ಸಂಗಡ ಹೇಗೆ ನಡೆದುಕೊಳ್ಳಬೇಕು ಎಂಬುದು ಅವನಿಗೆ ಚೆನ್ನಾಗಿ ಗೊತ್ತು. ಸದಾಚಾರ ನೀತಿಗಳನ್ನು ಅವನು ಬಲ್ಲ. ಅದರಂತೆ ನಡೆದೂ ನಡೆಯುತ್ತಾನೆ. ಆದರೆ ಅವನಿಗೆ ತನ್ನ ಹೆಸರು ಬರೆಯಲು ಬಾರದು. ಇಂಥವನಿಗೆ ಅಕ್ಷರಜ್ಞಾನ ನೀಡಿ ಏನು ಮಾಡಬೇಕೆನ್ನುತ್ತೀರಿ? ಅವನ ಸುಖಕ್ಕೆ ಒಂದು ಗುಂಜಿಯಷ್ಟಾದರೂ ಹೆಚ್ಚು ಸೇರಿಸಬಲ್ಲಿರಾ? ಅವನ ಗುಡಿಸಲು-ಪರಿಸ್ಥಿತಿಗಳ ಬಗ್ಗೆ ಅವನಿಗೆ ಅತೃಪ್ತಿಯುಂಟುಮಾಡಬೇಕೆ? ಹಾಗೆ ಮಾಡಲು ಈ ಶಿಕ್ಷಣವೇಕೆ ಬೇಕು? ಪಶ್ಚಿಮದ ವಿಚಾರ ಪ್ರವಾಹದಲ್ಲಿ ಕೊಚ್ಚಿಕೊಂಡು ಬಂದು ಹಿಂದುಮುಂದು ಆಲೋಚಿಸದೆ ಜನರಿಗೆ ಈ ಅಕ್ಷರ ಶಿಕ್ಷಣ ಕೊಡಬೇಕು ಎಂದು ನಾವು ತೀರ್ಮಾನ ಮಾಡಿದೆವು.

ಪ್ರೌಢ ಶಿಕ್ಷಣವನ್ನು ನೋಡಿ. ನಾನು ಭೂಗೋಳ, ಖಗೋಳ, ರೇಖಾಗಣಿತ, ಬೀಜಗಣಿತ. ಇತ್ಯಾದಿಗಳನ್ನು ಕಲಿತೆ, ಏನು ಪ್ರಯೋಜನ? ನನಗಾಗಲಿ ನನ್ನ ನೆರೆಯವರಿಗಾಗಲಿ ಅದರಿಂದ ಏನು ಲಾಭ? ಇವನ್ನು ನಾನು ಕಲಿತನೇಕೆ? ಪ್ರೊ. ಹಕ್ಸಲೇ ಶಿಕ್ಷಣವನ್ನು ಹೀಗೆ ವಿವರಿಸಿದ್ದಾನೆ- "ತನ್ನ ದೇಹ ತನಗೆ ದಾಸನಾಗಿ, ಹೇಳಿದ ಕೆಲಸವನ್ನು ಸರಾಗವಾಗಿ ಸಂತೋಷವಾಗಿ ಶಕ್ತಿಯಿದ್ದಷ್ಟು ಮಾಡುವಂತೆ ಯಾರಿಗೆ ತಾರುಣ್ಯದಲ್ಲಿ ಶಿಕ್ಷಣ ದೊರೆತಿದೆಯೋ; ಯಾರ ಬುದ್ಧಿ ಶುದ್ಧ, ಶಾಂತ, ನ್ಯಾಯದರ್ಶಿ ಆಗಿದೆಯೋ; ಯಾರ ಮನಸ್ಸು ಪ್ರಕೃತಿ ನಿಯಮಗಳ ಜ್ಞಾನದಿಂದ ಪೂರ್ಣವಾಗಿದೆಯೋ; ಯಾರ ಇಂದ್ರಿಯಗಳು ನಿಗ್ರಹಿತವೋ; ಯಾರ ಅಂತರಾತ್ಮ ಪರಿಶುದ್ಧವೋ; ಯಾರಿಗೆ ನೀಚ ಕಾರ್ಯವೆಂದರೆ ಹೇಸಿಗೆಯೋ; ಯಾರು ತನ್ನಂತೆಯೇ ಪರರನ್ನು ಕಾಣುತ್ತಾನೋ, ಅವನು ನಿಜವಾಗಿ ಶಿಕ್ಷಿತ. ಅವನು ಪ್ರಕೃತಿ ನಿಯಮದಂತೆ ನಡೆಯುತ್ತಾನೆ. ನಿಜವಾಗಿ ಅವನೇ ಸರಿಯಾದ ಶಿಕ್ಷಣ ಪಡೆದವನು. ಪ್ರಕೃತಿಯನ್ನು ಅವನು ಉತ್ತಮ ರೀತಿಯಲ್ಲಿ ಉಪಯೋಗಿಸಿ ಕೊಂಡಾನು, ಪ್ರಕೃತಿ ಅವನನ್ನು ಉತ್ತಮವಾಗಿ ಉಪಯೋಗಿಸೀತು."

ಇದು ನಿಜವಾದ ಶಿಕ್ಷಣವಾದರೆ. ನಾನು ಮೇಲೆ ಹೇಳಿದ ಶಾಸ್ತ್ರ ಒಂದಾದರೂ ಇಂದ್ರಿಯನಿಗ್ರಹಕ್ಕೆ ನನಗೆ ನೆರವಾಗಿಲ್ಲವೆಂದು ನಾನು ಘಂಟಾಘೋಷವಾಗಿ ಹೇಳುತ್ತೇನೆ. ಆದುದರಿಂದ ಪ್ರಾಥಮಿಕ ಶಿಕ್ಷಣವಾಗಲಿ ಪ್ರೌಢ ಶಿಕ್ಷಣವಾಗಲಿ ಪ್ರಯೋಜನಕರವಲ್ಲ. ಅದು ನಮ್ಮನ್ನು ಮನುಷ್ಯರಾಗಿ ಮಾಡದು; ನಮ್ಮ ಕರ್ತವ್ಯಗಳನ್ನು ನೆರವೇರಿಸುವಂತೆ ಮಾಡದು.

**ಓದುಗ :** ಹಾಗಾದರೆ ನಿಮ್ಮನ್ನೊಂದು ಪ್ರಶ್ನೆ ಕೇಳಬೇಕು. ಇದನ್ನೆಲ್ಲ ನೀವು ಯಾವ ಬಲದಿಂದ ಹೇಳುತ್ತಿದ್ದೀರಿ? ನಿಮಗೆ ಉಚ್ಚ ಶಿಕ್ಷಣ ಸಿಕ್ಕಿರದಿದ್ದರೆ ಇದನ್ನೆಲ್ಲ ವಿವರಿಸಲು ಸಾಧ್ಯವಾಗುತ್ತಿತ್ತೆ?

**ಸಂಪಾದಕ :** ಒಳ್ಳೆಯ ಮಾತು ಹೇಳಿದಿರಿ. ನನ್ನ ಉತ್ತರ ಸರಳ; ಈ ಪ್ರಾಥಮಿಕ ಶಿಕ್ಷಣ : ಪ್ರೌಢ ಶಿಕ್ಷಣಗಳಿಲ್ಲದಿದ್ದರೆ ನನ್ನ ಬಾಳು ವ್ಯರ್ಥವಾಗುತ್ತಿತ್ತು ಎಂಬುದನ್ನು ನಾನು ಎಳ್ಳಷ್ಟೂ ಒಪ್ಪುವುದಿಲ್ಲ. ನಾನು ಮಾತಾಡಿದುದರಿಂದ ಸೇವೆ ಮಾಡಿದಂತಾಯಿತು ಎಂಬುದನ್ನೂ ನಾನು ಒಪ್ಪುವುದಿಲ್ಲ. ಆದರೆ ನನಗೆ ಸೇವೆ ಮಾಡುವ ಆಸೆಯಿದೆ. ಅದನ್ನು ತೀರಿಸಿಕೊಳ್ಳಲು ನನಗೆ ದೊರೆತ ಶಿಕ್ಷಣವನ್ನು ಉಪಯೋಗಿಸುತ್ತಿದ್ದೇನೆ. ಅದರ ಉಪಯೋಗವಾದರೂ ಎಷ್ಟು ಜನಕ್ಕೆ ಲಾಭ? ನಿಮ್ಮಂಥ ಓದಿದವರಿಗೆ ಮಾತ್ರ, ನಮ್ಮ ಕೋಟಿಕೋಟಿ ಅಣ್ಣತಮ್ಮಂದಿರಿಗೆ ಏನು ಲಾಭ? ಇದೂ ನನ್ನ ವಿಚಾರಕ್ಕೆ ಪುಷ್ಟಿ ಕೊಡುತ್ತದೆ. ನಾನು ನೀವು ಇಬ್ಬರೂ ಪೊಳ್ಳು ಶಿಕ್ಷಣದ ಬಲೆಗೆ ಬಿದ್ದಿದ್ದೇವೆ. ಅದರ ದುಷ್ಟ ಪ್ರಭಾವದಿಂದ ನಾನು ಮುಕ್ತನಾಗಿದ್ದೇನೆ ಎಂದು ತಿಳಿದಿದ್ದೇನೆ. ನನ್ನ ಅನುಭವದ ಲಾಭವನ್ನು ನಿಮಗೆ ಕೊಡುತ್ತಿದ್ದೇನೆ. ಹಾಗೆ ಮಾಡುತ್ತ ಈ ಶಿಕ್ಷಣದ ಕೊಳಕನ್ನು ನಿಮಗೆ ತೋರಿಸುತ್ತಿದ್ದೇನೆ.

ಅಕ್ಷರಜ್ಞಾನ ಸದಾಕಾಲದಲ್ಲಿಯೂ ಕೆಟ್ಟದೆಂದು ನಾನು ಹೇಳಲಿಲ್ಲ. ಬರೀ ಅಕ್ಷರದ ಭ್ರಾಂತಿ ತಪ್ಪು ಎಂದು ಹೇಳುತ್ತಿದ್ದೇನೆ. ಅದು ನಮ್ಮ ಕಾಮಧೇನುವಲ್ಲ. ಅದರ ಮಿತಿಯಲ್ಲಿ ಅದು ಉಪಯುಕ್ತವೇ. ನಮ್ಮ ಇಂದ್ರಿಯಗಳನ್ನು ನಿಗ್ರಹಿಸಿ, ನಮ್ಮ ನೀತಿಯ ತಳಹದಿಯನ್ನು ಬಲಪಡಿಸಿದ ಮೇಲೆ ಅದರಿಂದ ಉಪಯೋಗ ವಾದೀತು. ಆಗ ನಮಗೆ ಬೇಕೆನಿಸಿದರೆ ಅಕ್ಷರಜ್ಞಾನವನ್ನು ಪಡೆಯಬಹುದು. ಅದನ್ನು ಸರಿಯಾಗಿ ಉಪಯೋಗಿಸಬಹುದು. ಆಗ ನಮಗದು ಭೂಷಣವೂ ಆದೀತು. ಈ ಶಿಕ್ಷಣವನ್ನು ಬಲಾತ್ಕಾರ ಮಾಡಬೇಕಾಗಿಲ್ಲ. ನಮ್ಮ ಹಳೆಯ ಪಾಠಶಾಲೆಗಳ

ಪದ್ಧತಿಯೆ ಸಾಕು. ಅದರಲ್ಲಿ ಸದಾಚಾರ ಶಿಕ್ಷಣಕ್ಕೆ ಪ್ರಥಮ ಸ್ಥಾನ. ಅದೇ ಪ್ರಾಥಮಿಕ ಶಿಕ್ಷಣ. ಆ ತಳಹದಿಯ ಮೇಲೆ ಕಟ್ಟಿದ ಕಟ್ಟಡ ಭದ್ರ ಶಾಶ್ವತ.

**ಓದುಗ :** ಸ್ವರಾಜ್ಯ ಪ್ರಾಪ್ತಿಗೆ ಇಂಗ್ಲಿಷ್ ಶಿಕ್ಷಣ ಅತ್ಯಗತ್ಯವಿಲ್ಲ ಎಂದು ನಮ್ಮ ಅಭಿಪ್ರಾಯವೇ?

**ಸಂಪಾದಕ :** ಹೌದು-ಅಲ್ಲ. ಎರಡೂ ಉತ್ತರ ನನ್ನದು. ಕೋಟಿಗಟ್ಟಲೆ ಜನರಿಗೆ ಇಂಗ್ಲಿಷ್ ಕಲಿಸುವುದು ಅವರನ್ನು ಗುಲಾಮರಾಗಿ ಮಾಡಿದಂತೆ. ಮೆಕಾಲೆ ಹಾಕಿದ ಶಿಕ್ಷಣದ ತಳಹದಿ ನಮ್ಮನ್ನು ಗುಲಾಮಗಿರಿಗೆ ನೂಕಿದೆ. ಆತನಿಗೆ ಆ ಉದ್ದೇಶ್ಯವಿತ್ತೆಂದು ನನ್ನ ಅಭಿಪ್ರಾಯವಲ್ಲ. ಪರಿಣಾಮವೇನೋ ಅದೇ. ಸ್ವರಾಜ್ಯ ವನ್ನು ಕುರಿತು ನಾವು ಪರಭಾಷೆಯಲ್ಲಿ ಮಾತಾಡಬೇಕಾಗಿದೆ. ಇದೇ ಸಾಲದೆ ನಮ್ಮ ದುರ್ದಶೆಗೆ ಸಾಕ್ಷಿ?

ಇನ್ನೊಂದು ಗಮನೀಯ ಅಂಶವಿದೆ. ಯೂರೋಪಿನಲ್ಲಿ ಕೈಬಿಟ್ಟ ಪದ್ಧತಿಗಳು ನಮಗೆ ಶಿರೋಧಾರ್ಯ-ಇಂಗ್ಲಿಷ್ ವಿದ್ವಾಂಸರು ಸದಾ ಶಿಕ್ಷಣ ಪದ್ಧತಿಯನ್ನು ಬದಲಿಸುತ್ತಿರುತ್ತಾರೆ. ಅವರು ವರ್ಜಿಸಿದ ಪದ್ಧತಿಯನ್ನೇ ನಾವು ತಬ್ಬಿಕೊಳ್ಳುತ್ತೇವೆ. ಅಲ್ಲಿ ಪ್ರತಿಯೊಂದು ಪ್ರದೇಶವೂ ವೃದ್ಧಿಯಾಗುವಂತೆ ಯತ್ನ ನಡೆದಿದೆ. ವೇಲ್ಸ್ ಇಂಗ್ಲೆಂಡಿನಲ್ಲಿ ಒಂದು ಚಿಕ್ಕ ಪ್ರದೇಶ. ವೇಲ್ಸ್ ಜನರಲ್ಲಿ ಆ ಭಾಷೆ ವೃದ್ಧಿಯಾಗುವಂತೆ ಪ್ರಯತ್ನ ನಡೆದಿದೆ. ವೇಲ್ಸ ಮಕ್ಕಳು ತಮ್ಮ ತಾಯಿ ನುಡಿಯನ್ನೇ ಬಳಸುವಂತೆ ಚಳವಳಿ ನಡೆದಿದೆ. ಅದಕ್ಕೆ ಇಂಗ್ಲೆಂಡಿನ ಕೋಶಾಧ್ಯಕ್ಷ ಮಿ. ಲಾಯಡ್ ಜಾರ್ಜ್ ಮುಂದಾಳು, ನಮ್ಮ ಸ್ಥಿತಿ ಹೇಗಿದೆ ಇತ್ತ? ಒಬ್ಬರಿಗೊಬ್ಬರು ತಪ್ಪು ತಪ್ಪು ಇಂಗ್ಲಿಷಿನಲ್ಲಿ ಪತ್ರ ಬರೆಯುತ್ತೇವೆ. ಎಂ.ಎ., ಮಾಡಿದವರೂ ಈ ತಪ್ಪು ಮಾಡುತ್ತಾರೆ. ನಮ್ಮ ಉತ್ತಮ ವಿಚಾರಗಳೆಲ್ಲ ಇಂಗ್ಲಿಷಿನಲ್ಲಿ ವ್ಯಕ್ತವಾಗಬೇಕು. ನಮ್ಮ ಕಾಂಗ್ರೆಸ್ಸಿನ ಕಾರ್ಯಕ್ರಮ ಇಂಗ್ಲಿಷಿನಲ್ಲಿ ನಡೆಯುತ್ತದೆ. ನಮ್ಮ ಸರ್ವೋತ್ತಮ ಪತ್ರಿಕೆಗಳು ಇಂಗ್ಲಿಷಿನಲ್ಲಿ. ಈ ಪರಿಸ್ಥಿತಿ ಬಹುಕಾಲ ನಡೆದರೆ, ಮುಂದಿನ ಪೀಳಿಗೆ ನಮ್ಮನ್ನು ಶಪಿಸಿಯಾರು. ಇದು ನನ್ನ ದೃಢಾಭಿಪ್ರಾಯ.

ಈ ಇಂಗ್ಲಿಷ್ ಶಿಕ್ಷಣ ಪಡೆದು ನಾವು ದೇಶವನ್ನು ಗುಲಾಮತನಕ್ಕೆ ಈಡುಮಾಡಿದ್ದೇವೆಂಬುದು ಗಮನಿಸಬೇಕಾದ ಮಾತು. ರಾಗದ್ವೇಷ, ಅಸತ್ಯ, ದೌರ್ಜನ್ಯಗಳು ಹೆಚ್ಚಿವೆ. ಇಂಗ್ಲಿಷ್ ಕಲಿತ ಭಾರತೀಯರು ಜನರನ್ನು ಮೋಸ ಗೊಳಿಸಲು, ಬೆದರಿಸಲು ನಿಸ್ಸಂದೇಹವಾಗಿ ಯತ್ನಿಸಿದ್ದಾರೆ. ಈಗ

ಸಾಮಾನ್ಯರಿಗಾಗಿ ಏನಾದರೂ ಮಾಡುತ್ತಿದ್ದರೆ, ಅವರ ಋಣ ತೀರಿಸುತ್ತಿದ್ದೇವೆ. ಅಷ್ಟೇ.

ನ್ಯಾಯಾಲಯಕ್ಕೆ ಹೋಗಬೇಕಾದರೆ ಇಂಗ್ಲಿಷು ಗೊತ್ತಿರಲೇಬೇಕು. ಅದಕ್ಕಿಂತ ದುಃಖವುಂಟೆ? ಬ್ಯಾರಿಸ್ಟರ್ ಆದರೆ ನಾನು ನನ್ನ ತಾಯಿನುಡಿಯಲ್ಲಿ ಮಾತಾಡ ಲಾಗದು. ತಾಯಿನುಡಿಯಲ್ಲಿ ಹೇಳಿದುದನ್ನು ಯಾರೋ ಭಾಷಾಂತರ ಮಾಡಬೇಕು. ಇದಕ್ಕಿಂತ ಮೂರ್ಖತನವೆ? ಇದು ಗುಲಾಮಗಿರಿಯ ಗುರುತಲ್ಲವೆ? ಇದಕ್ಕಾಗಿ ಇಂಗ್ಲಿಷರನ್ನು ಬೈಯಬೇಕೋ, ನನ್ನನ್ನೋ? ನಿಜವಾಗಿ ಇಂಗ್ಲಿಷ್ ಕಲಿತ ನಾವೇ ಹಿಂದೂಸ್ಥಾನಕ್ಕೆ ಗುಲಾಮಗಿರಿಯ ಸಂಕೋಲೆ ತೊಡಿಸಿದವರು. ರಾಷ್ಟ್ರದ ಶಾಪ ಇಂಗ್ಲಿಷರಿಗಲ್ಲ. ನಮಗೇ.

ನಿಮ್ಮ ಪ್ರಶ್ನೆಗೆ ಹೌದು-ಅಲ್ಲ ಎರಡೂ ಉತ್ತರ ಎಂದೆ. ಹೌದು ಎಂಬುದಕ್ಕೆ ಇಷ್ಟು ವಿವರ, ಇನ್ನು ಅಲ್ಲ ಎಂಬುದನ್ನು ವಿವರಿಸುತ್ತೇನೆ.

ಆಧುನಿಕತೆ ನಾಗರಿಕತೆಯ ರೋಗಕ್ಕೆ ನಾವು ಪೂರಾ ತುತ್ತಾಗಿದ್ದೇವೆ. ಆದುದರಿಂದ ಇಂಗ್ಲಿಷನ್ನು ಸಂಪೂರ್ಣವಾಗಿ ಬಿಡಲು ಆಗುವುದಿಲ್ಲ. ಈಗಾಗಲೇ ಇಂಗ್ಲಿಷ್ ಕಲಿತವರು ಅಗತ್ಯವಾದಲ್ಲೆಲ್ಲ ಅದನ್ನು ಉಪಯೋಗಿಸಲಿ. ಇಂಗ್ಲಿಷರೊಡನೆ ವ್ಯವಹರಿಸುವಾಗ ನಮ್ಮವರೊಡನೆ ಬೇರೆ ಭಾಷೆಯಲ್ಲಿ ಪತ್ರವ್ಯವಹಾರ ಮಾಡಲು ಸಾಧ್ಯವಿಲ್ಲದಲ್ಲಿ ಇಂಗ್ಲಿಷರೇ ತಮ್ಮ ನಾಗರಿಕತೆಯ ಬಗ್ಗೆ ಎಷ್ಟು ಅಸಹ್ಯಪಟ್ಟು ಕೊಂಡಿದ್ದಾರೋ ತಿಳಿಯಲು ನಾವು ಇಂಗ್ಲಿಷನ್ನು ಕಲಿಯಬಹುದು. ಬಳಸಬಹುದು, ಇಂಗ್ಲಿಷ್ ಕಲಿತವರು ತಮ್ಮ ಸಂತಾನಕ್ಕೆ ತಮ್ಮ ತಾಯಿ ನುಡಿಯಲ್ಲಿ ನೀತಿಯನ್ನು ಕಲಿಸಬೇಕು. ಇನ್ನೊಂದು ಭಾರತೀಯ ಭಾಷೆಯನ್ನು ಕಲಿಸಬೇಕು. ಬೆಳೆದ ಮೇಲೆ ಅವರು ಇಂಗ್ಲಿಷ್ ಕಲಿತರೆ ಕಲಿಯಲಿ. ಆದರೆ ಇಂಗ್ಲಿಷ್ ನಮಗೆ ಅಗತ್ಯ ವಾಗಬಾರದೆಂಬುದು ನಮ್ಮ ಗುರಿ. ಅದನ್ನು ಕಲಿತು ಹಣಗಳಿಸುವ ಉದ್ದೇಶವನ್ನು ಬಿಡಬೇಕು. ಇಷ್ಟು ಮಿತವಾಗಿ ಇಂಗ್ಲಿಷನ್ನು ಕಲಿತರೂ ಏನು ಕಲಿಯಬೇಕು, ಇಂಗ್ಲಿಷಿನಲ್ಲಿ ಏನು ಕಲಿಯಬಾರದು ಎಂಬುದನ್ನು ಯೋಚಿಸಬೇಕು. ಯಾವ ವಿಜ್ಞಾನಶಾಸ್ತ್ರವನ್ನು ಕಲಿಯಬೇಕೋ ತಿಳಿದುಕೊಳ್ಳುವುದು ಅಗತ್ಯ, ಇಂಗ್ಲಿಷ್ ಪ್ರಶಸ್ತಿಗಳನ್ನು ನಾವು ಸ್ವಲ್ಪ ಅಸಡ್ಡೆ ಮಾಡಲಿ. ಆಡಳಿತಗಾರರ ಕಿವಿ ನೆಟ್ಟಗಾದೀತು.

**ಓದುಗ** : ಹಾಗಾದರೆ, ನಾವು ಎಂಥ ಶಿಕ್ಷಣ ಪಡೆಯಬೇಕು?

**ಸಂಪಾದಕ** : ಮೇಲೆ ಇದನ್ನು ಸೂಕ್ಷ್ಮವಾಗಿ ಚರ್ಚಿಸಿದೆ. ಇನ್ನೂ ವಿವರವಾಗಿ ನೋಡೋಣ. ನಮ್ಮ ಭಾಷೆಗಳನ್ನೆಲ್ಲ ವೃದ್ಧಿಗೊಳಿಸಬೇಕು. ನಮ್ಮ ಭಾಷೆಗಳಲ್ಲಿ ಯಾವ ವಿಷಯಗಳನ್ನು ಕಲಿಯಬೇಕೆಂಬುದನ್ನು ಇಲ್ಲಿ ವಿಸ್ತರಿಸಬೇಕಾಗಿಲ್ಲ. ಇಂಗ್ಲಿಷಿನ ಅಮೂಲ್ಯ ಗ್ರಂಥಗಳು ನಮ್ಮ ಭಾಷೆಗಳಿಗೆ ಭಾಷಾಂತರವಾಗಲಿ. ಅನೇಕ ವಿಜ್ಞಾನಶಾಸ್ತ್ರಗಳನ್ನು ಕಲಿಯುವ ಈ ಭ್ರಾಂತಿ ಹೋಗಬೇಕು. ಧಾರ್ಮಿಕ ಎಂದರೆ ನೈತಿಕ ಶಿಕ್ಷಣ ಅಗ್ರಸ್ಥಾನ ಪಡೆಯಬೇಕು. ಸುಸಂಸ್ಕೃತನಾದ ಪ್ರತಿಯೊಬ್ಬ ಭಾರತೀಯನೂ ತನ್ನ ಪ್ರಾದೇಶಿಕ ಭಾಷೆಯ ಜೊತೆಗೆ, ಹಿಂದೂವಾದರೆ ಸಂಸ್ಕೃತ, ಮುಸಲ್ಮಾನನಾದರೆ ಅರಬ್ಬಿ, ಪಾರಸಿಯಾದರೆ ಪರ್ಶಿಯನ್ ಕಲಿತಾನು, ಹಿಂದಿಯನ್ನು ಎಲ್ಲರೂ ಕಲಿಯಬೇಕು. ಕೆಲವರು ಹಿಂದೂಗಳಿಗೆ ಅರಬ್ಬೀ ಪಾರಸಿ ತಿಳಿದಿರಲಿ, ಕೆಲವರು ಮುಸಲ್ಮಾನರು ಪಾರಸೀಗಳು ಸಂಸ್ಕೃತ ಕಲಿಯಲಿ. ಉತ್ತರ ದೇಶದವರು, ಪಶ್ಚಿಮ ಸೀಮೆಯವರು ತಮಿಳನ್ನು ಕಲಿಯಲಿ. ಹಿಂದೂಸ್ಥಾನಕ್ಕೆ ಹಿಂದೀ ಸಾಮಾನ್ಯ ಸಾರ್ವತ್ರಿಕ ಭಾಷೆಯಾಗಬೇಕು. ಅದರ ಲಿಪಿ ನಾಗರಿ ಅಥವಾ ಪಾರಸೀ. ಅವರವರ ಇಷ್ಟದಂತೆ ಆಗಬಹುದು. ಹಿಂದೂ ಮುಸಲ್ಮಾನ ಸೌಹಾರ್ದಕ್ಕೆ ಎರಡೂ ಲಿಪಿಗಳನ್ನು ತಿಳಿದಿರುವುದು ಅಗತ್ಯ. ಇಷ್ಟು ಮಾಡಿದರೆ ಇಂಗ್ಲಿಷ್ ಭಾಷೆಯನ್ನು ಒಂದು ಗಳಿಗೆಯಲ್ಲಿ ಓಡಿ ಬಹುದು. ನಾವು ಗುಲಾಮ ರಾಗಿದ್ದೇವೆ. ಅದರಿಂದ ಇಷ್ಟೆಲ್ಲ ಮಾಡಬೇಕು. ನಮ್ಮ ಗುಲಾಮಗಿರಿಯ ದೆಸೆಯಿಂದ ಇಡೀ ರಾಷ್ಟ್ರವೇ ಗುಲಾಮವಾಗಿದೆ; ನಾವು ಮುಕ್ತರಾದರೆ ರಾಷ್ಟ್ರಕ್ಕೂ ಬಿಡುಗಡೆ.

**ಓದುಗ** : ಆದರೆ ಧಾರ್ಮಿಕ ಶಿಕ್ಷಣ ಬಹಳ ತೊಡಕಾದುದಲ್ಲವೇ?

**ಸಂಪಾದಕ** : ಧಾರ್ಮಿಕ ಶಿಕ್ಷಣವಿಲ್ಲದೆ ಏನೂ ನಡೆಯದು. ಹಿಂದೂಸ್ಥಾನ ಎಂದಿಗೂ ನಾಸ್ತಿಕವಾಗದು, ನಾಸ್ತಿಕತೆಯ ಭಾರವನ್ನು ಈ ಭರತ ಭೂಮಿ ಸೈರಿಸದು. ಈ ಕೆಲಸ ಸುಲಭವಲ್ಲ. ಧಾರ್ಮಿಕ ಶಿಕ್ಷಣದ ವಿಚಾರ ಬಂದಾಗ ನನಗೆ ತಲೆ ತಿರುಗುತ್ತದೆ. ನಮ್ಮ ಧರ್ಮೋಪದೇಶಕರು ಕಪಟಿಗಳು ಸ್ವಾರ್ಥಿಗಳು. ಮುಲ್ಲಾಗಳು ದಸ್ತೂರರು ಬ್ರಾಹ್ಮಣರು ಇವರ ಕೈಯಲ್ಲಿದೆ ಕೀಲಿ. ಅವರಿಗೆ ಸದ್ಬುದ್ಧಿ ಹುಟ್ಟದಿದ್ದರೆ, ನಾವು ಇಂಗ್ಲಿಷ್ ಶಿಕ್ಷಣ ಕಲಿತು ಗಳಿಸಿದ ಉತ್ಸಾಹವನ್ನೆಲ್ಲ

ಧಾರ್ಮಿಕ ಶಿಕ್ಷಣಕ್ಕಾಗಿ ಉಪಯೋಗಿಸಬೇಕು. ಇದೇನು ಕಷ್ಟವಲ್ಲ. ಈಗ ಇನ್ನೂ ಸಮುದ್ರದ ದಡ ಮಾತ್ರ ಹೊಲಸಾಗಿದೆ. ದಡದಲ್ಲಿರುವವರು ಶುದ್ಧವಾದರೆ ಸಾಕು. ನಾವೇ ದಡದಲ್ಲಿರುವವರು; ನಾವು ಆತ್ಮಶುದ್ಧಿ ಮಾಡಿಕೊಂಡರಾಯಿತು. ನಮ್ಮ ಕೋಟ್ಯಾಂತರ ಜನರಿಗೆ ಈ ಮಾತು ಸಂಬಂಧಿಸಿಲ್ಲ. ಹಿಂದೂಸ್ಥಾನ ತನ್ನ ಪೂರ್ವ ಸ್ಥಿತಿಗೆ ಬರಬೇಕು ಎಂದರೆ ನಾವು ಮೊದಲು ಪೂರ್ವ ಸ್ಥಿತಿಗೆ ಹಿಂದಿರುಗಬೇಕು. ನಮ್ಮ ಸಭ್ಯತೆಯಲ್ಲಿಯೂ ಉನ್ನತಿ-ಅವನತಿ ಪ್ರಗತಿ ತಿರೋಗತಿ ಇದ್ದೇ ಇರುತ್ತವೆ; ಆದರೆ ಒಂದು ಮುಖ್ಯ ಪ್ರಯತ್ನ ನಡೆಯಬೇಕು; ಪಶ್ಚಿಮದ ನಾಗರಿಕತೆಯನ್ನು ಓಡಿಸುವ ಪ್ರಯತ್ನ. ಉಳಿದುದೆಲ್ಲ ತಾನೇ ಆಗುತ್ತದೆ.



# ಅಧ್ಯಾಯ – 19

## ಯಂತ್ರ ಕಾರಖಾನೆ

**ಓದುಗ :** ಪಶ್ಚಿಮದ ನಾಗರಿಕತೆಯನ್ನು ಓಡಿಸುವುದು ಎಂದರೆ ನಿಮ್ಮ ಮನಸ್ಸಿನಲ್ಲಿ ಯಂತ್ರ ಕಾರಖಾನೆಗಳು ನಮಗೆ ಅಗತ್ಯವಿಲ್ಲ ಎಂದೇ ಅಲ್ಲವೇ?

**ಸಂಪಾದಕ :** ಈ ಪ್ರಶ್ನೆಯೆತ್ತಿ ನನ್ನ ಗಾಯಕ್ಕೆ ಉಪ್ಪು ಸುರಿದಿರಿ ನೀವು ರಮೇಶಚಂದ್ರದತ್ತರ 'ಹಿಂದೂಸ್ಥಾನದ ಆರ್ಥಿಕ ಇತಿಹಾಸ'ವನ್ನು ಓದಿದಾಗ ನನಗ ಅಳು ಬಂತು. ಈಗಲೂ ಅದನ್ನು ನೆನೆದರೆ ಎದೆ ಒಡೆದು ಹೋಗುತ್ತದೆ. ಈ ಯಂತ್ರ-ಕಾರಖಾನೆಗಳಿಂದಲೇ ಹಿಂದೂಸ್ಥಾನ ಬಡತನದಲ್ಲಿ ಮುಳುಗಿದೆ. ಮ್ಯಾಂಚೆಸ್ಟರ್ ನಮಗೆ ಮಾಡಿರುವ ಹಾನಿಗೆ ಮಿತಿಯೇ ಇಲ್ಲ. ಮ್ಯಾಂಚೆಸ್ಟರ್ ನಿಂದಲೇ ಹಿಂದುಸ್ಥಾನದ ಕೈಗಾರಿಕೆಯೆಲ್ಲ ನಾಶವಾಗಿದೆ.

ಇಲ್ಲ. ನಾನು ಮರೆತೆ. ಮ್ಯಾಂಚೆಸ್ಟರನ್ನು ನಾನು ಹೇಗೆ ನಿಂದಿಸಲಿ? ನಾವು ಮ್ಯಾಂಚೆಸ್ಟರ್ ಬಟ್ಟೆಯನ್ನು ತೊಟ್ಟೆವು; ಅವರು ಅದನ್ನು ನೇಯ್ದರು. ಬಂಗಾಳದ ಶೌರ್ಯದ ವಿಷಯ ಓದಿ ನನಗ ಬಹಳ ಹರ್ಷವಾಯಿತು. ಆ ಪ್ರಾಂತ್ಯದಲ್ಲಿ ಬಟ್ಟೆಯ ಗಿರಣಿಗಳಿಲ್ಲ. ಆದುದರಿಂದ, ಹಿಂದಣ ಕೈಮಗ್ಗದ ಕೈಗಾರಿಕೆಯನ್ನು ಮತ್ತೆ ರೂಢಿಗೆ ತಂದರು. ಬೊಂಬಾಯಿ ಗಿರಣಿಗಳಿಗೆ ಬಂಗಾಳ ಪ್ರೋತ್ಸಾಹ ಕೊಡುತ್ತದೆ. ನಿಜ. ಬಂಗಾಳ ಸಂಪೂರ್ಣವಾಗಿ ಸಮಸ್ತ ಗಿರಣಿ ಪದಾರ್ಥಗಳನ್ನೂ ಬಹಿಷ್ಕರಿಸಿದ್ದರೆ ಚೆನ್ನಾಗಿತ್ತು.

ಗಿರಣಿ-ಕಾರಖಾನೆಗಳಿಂದ ಯೂರೋಪು ಹಾಳಾಗುತ್ತಿದೆ. ವಿನಾಶ ಆಗಲೇ ಇಂಗ್ಲಿಷರ ಬಾಗಿಲು ತಟ್ಟುತ್ತಿದೆ. ಆಧುನಿಕ ನಾಗರಿಕತೆಗೆ ಯಂತ್ರ ಕಾರಖಾನೆ ಮುಖ್ಯ ಲಕ್ಷಣ. ಇದು ಮಹಾ ಪಾಪ. ಬೊಂಬಾಯಿ ಗಿರಣಿ ಕೆಲಸಗಾರರು

ಗುಲಾಮರಾಗಿದ್ದಾರೆ. ಗಿರಣಿಗಳಲ್ಲಿ ಕೆಲಸ ಮಾಡುವ ಹೆಂಗಸರ ಸ್ಥಿತಿ ಮನ ಕುದಿಸುತ್ತದೆ. ಗಿರಣಿಗಳಿಲ್ಲದಾಗ ಈ ಹೆಂಗಸರು ಉಪವಾಸವಿರಲಿಲ್ಲ. ಈ ಯಂತ್ರಗಳ ಭ್ರಾಂತಿ ಹೆಚ್ಚಿದರೆ ನಮ್ಮ ದೇಶ ಬಹಳ ದುಃಖಕ್ಕೆ ಗುರಿಯಾಗುತ್ತದೆ. ಈ ಮಾತು ಲೋಕವಿರುದ್ಧವಾಗಿ ಕಂಡೀತು; ಆದರೂ ಹೇಳುತ್ತೇನೆ. ಮ್ಯಾಂಚೆಸ್ಟರಿಗೇ ಹಣ ಕಳಿಸಿ ಆ ದರಿದ್ರ ಬಟ್ಟೆಯನ್ನು ಉಪಯೋಗಿಸಿದರೂ ಚಿಂತೆಯಿಲ್ಲ. ಹಿಂದೂಸ್ಥಾನ ದಲ್ಲಿ ಗಿರಣಿಗಳು ಹೆಚ್ಚುವುದು ಬೇಡ. ಮ್ಯಾಂಚೆಸ್ಟರ ಬಟ್ಟೆಯನ್ನು ಬಳಸಿದರೆ ನಮ್ಮ ಹಣವಷ್ಟೇ ಹಾಳು; ಹಿಂದೂಸ್ಥಾನದಲ್ಲಿ ಮ್ಯಾಂಚೆಸ್ಟರಿನ ನಕಲು ಮಾಡಿದರೆ ನಮ್ಮ ಹಣ ಹಿಂದೂಸ್ಥಾನದಲ್ಲಿಯೇ ಉಳಿದೀತು. ಆದರೆ ನಮ್ಮ ನೆತ್ತರನ್ನೆ ಅದು ಹೀರಿಬಿಟ್ಟೀತು. ನಮ್ಮ ನೀತಿಯೆಲ್ಲ ಹಾಳಾದೀತು. ಬೇಕಾದರೆ ಗಿರಣಿಯ ಕೆಲಸ ಗಾರರನ್ನೆ ಕೇಳಿ ತಿಳಿದುಕೊಳ್ಳಿ. ಗಿರಣಿಗಳಿಂದ ಐಶ್ವರ್ಯ ಗಳಿಸಿದವರು ಇತರ ಐಶ್ವರ್ಯವಂತರಿಗಿಂತ ಉತ್ತಮವೇನಲ್ಲ. ಅಮೇರಿಕಾದ ರಾಕ್‌ಫೆಲರ್‌ಗಿಂತ ಭಾರತೀಯ ರಾಕ್‌ಫೆಲರ್ ಉತ್ತಮ ಎಂಬುದು ಬರೀ ಭ್ರಾಂತಿ. ದರಿದ್ರ ಹಿಂದೂಸ್ಥಾನ ಸ್ವತಂತ್ರವಾಗಬಲ್ಲದು. ಆದರೆ ನೀತಿಭ್ರಷ್ಟವಾಗಿ ಧನವಂತವಾದ ಹಿಂದೂಸ್ತಾನ ಸ್ವತಂತ್ರವಾಗುವುದು ಕಷ್ಟ ಹಣವಂತರು ಬ್ರಿಟಿಷರ ಆಡಳಿತದ ಆಧಾರ ಎಂಬುದನ್ನು ಒಪ್ಪಬೇಕಾಗುತ್ತದೆ. ಅವರ ಆಡಳಿತ ಭದ್ರವಾದರೆ ಇವರ ಹಿತವೂ ಭದ್ರ, ಹಣ ಮನಸ್ಯನನ್ನು ನಾಶಮಾಡುತ್ತದೆ. ಅದರಷ್ಟೇ ನಾಶಕಾರಿಯಾದ ಇನ್ನೊಂದು ವಿಷಯವಾಸನೆ ಅಥವಾ ಕಾಮ, ಎರಡೂ ವಿಷವೇ, ಹಾವಿಗಿಂತ ಹೆಚ್ಚು ವಿಷ ಇವಕ್ಕೆ. ಹಾವಿನ ವಿಷ ಮೈಗೆ ಮೃತ್ಯು; ಕಾಮಿನಿ ಕಾಂಚನದ ವಿಷ ಮೈಮನ ಆತ್ಮ ಎಲ್ಲಕ್ಕೂ ಮೃತ್ಯು. ಆದುದರಿಂದ ಗಿರಣಿ ಕಾರಖಾನೆಗಳು ಹೆಚ್ಚಿದರೆ ನಮಗೆ ಹರ್ಷವಾಗಬೇಕಾಗಿಲ್ಲ.

**ಓದುಗ :** ಹಾಗಾದರೆ ಗಿರಣಿಗಳನ್ನು ಮುಚ್ಚಬೇಕೆ?

**ಸಂಪಾದಕ:** ಅದು ಕಷ್ಟ ಬೇರೂರಿದ ವಸ್ತುವನ್ನು ಕಿತ್ತೆಸೆಯುವುದು, ಸುಲಭವಲ್ಲ. ಆದುದರಿಂದ ಅನಾರಂಭವೇ. ಕೆಲಸವನ್ನು ಮೊದಲಿಡದಿರುವುದೇ ಬುದ್ಧಿವಂತಿಕೆ ಎನ್ನುತ್ತಾರೆ. ಗಿರಣಿಗಾರರನ್ನು ನಾವು ಬಯ್ಯಬೇಕಾಗಿಲ್ಲ. ಅವರ ಬಗ್ಗೆ ಕನಿಕರಿಸಬೇಕು. ತಮ್ಮ ಗಿರಣಿಗಳನ್ನು ಅವರು ಬಿಡುತ್ತಾರೆ ಎಂದು ನಿರೀಕ್ಷಿಸುವುದು ಅತಿಯಾದೀತು. ಇನ್ನು ಹೆಚ್ಚಿಸಬೇಡಿ ಎಂದು ಅವರನ್ನು ಪ್ರಾರ್ಥಿಸಬಹುದಲ್ಲ. ಒಳ್ಳೆಯ ದಾರಿ

ಹಿಡಿದರೆ ಅವರು ಕ್ರಮೇಣ ತಮ್ಮ ಕೆಲಸವನ್ನು ಕಡಿಮೆ ಮಾಡುತ್ತಾ ಬಂದಾರು. ಪೂರ್ವಕಾಲದ ಪವಿತ್ರವಾದ ಕೈಮಗ್ಗಗಳನ್ನು ಸಾವಿರಾರು ಮನೆಗಳಲ್ಲಿ ಅವರು ಹೂಡಿಸಬಹುದು. ಅವರು ನೆಯ್ದ ಬಟ್ಟೆಯನ್ನು ತಾವೇ ಕೊಳ್ಳಬಹುದು. ಗಿರಣಿದಾರರು ಈ ಕೆಲಸ ಮಾಡಲಿ ಬಿಡಲಿ, ಜನರು ಗಿರಣಿಯ ವಸ್ತುಗಳ ಉಪಯೋಗವನ್ನು ನಿಲ್ಲಿಸಬೇಕು.

**ಓದುಗ** : ಇಲ್ಲಿಯವರೆಗೆ ನೀವು ಗಿರಣಿಯ ಬಟ್ಟೆಯ ಮಾತನ್ನೆ ಹೇಳಿದಿರಿ. ಆದರೆ ಇನ್ನೂ ಎಷ್ಟೋ ಇವೆ, ಗಿರಣಿಗಳಲ್ಲಿ ಆಗುವ ಇತರ ಪದಾರ್ಥಗಳು. ಅವನ್ನು ಹೊರಗಿನಿಂದಾದರೂ ತರಿಸಿಕೊಳ್ಳಬೇಕು; ಇಲ್ಲ ಅಂಥ ಗಿರಣಿಗಳನ್ನಾದರೂ ಕಟ್ಟಬೇಕು.

**ಸಂಪಾದಕ** : ನಿಜ, ಈಗ ನಮ್ಮ ದೇವರ ವಿಗ್ರಹಗಳೂ ಪಟಗಳೂ ಜರ್ಮನಿಯಿಂದ ಬರುತ್ತಿವೆ. ಇನ್ನು ಬೆಂಕಿಕಡ್ಡಿ, ಗುಂಡುಸೂಜಿ, ಗಾಜು–ಪಿಂಗಾಣಿ ಸಾಮಾನಿನ ಮಾತು ಹೇಳಬೇಕೆ? ಇದಕ್ಕೆ ನನ್ನ ಉತ್ತರ ಒಂದೇ. ಈ ವಸ್ತುಗಳೆಲ್ಲ ಬರುವ ಮೊದಲು ಹಿಂದೂಸ್ಥಾನ ಏನು ಮಾಡುತ್ತಿತ್ತು? ಇವೊತ್ತೂ ಹಾಗೆಯೇ ಮಾಡಬೇಕು. ಯಂತ್ರಗಳಿಲ್ಲದೆ ಗುಂಡುಸೂಜಿ ಮಾಡಲಾಗುವುದಿಲ್ಲ. ಅದು ಬೇಡವೇ ಬೇಡ. ಈ ಗಾಜಿನ ಥಳುಕನ್ನೆಲ್ಲ ಬಿಡೋಣ. ಹಿಂದಿನಂತೆ ಮನೆಯಲ್ಲಿ ಬೆಳೆದ ಹತ್ತಿಯಿಂದ ಬತ್ತಿಮಾಡಿ, ಹಣತೆಗಳಲ್ಲಿ ದೀಪ ಉರಿಸೋಣ. ಹಾಗೆ ಮಾಡಿದರೆ ನಮ್ಮ ಹಣವೂ ಉಳಿಯುತ್ತದೆ. ಕಣ್ಣು ಹಾಳಾಗುವುದೂ ತಪ್ಪುತ್ತದೆ. ಸ್ವದೇಶಿಗೆ ನೆರವಾಗಿ ಸ್ವರಾಜ್ಯ ಗಳಿಸಲು ದಾರಿಯಾಗುತ್ತದೆ.

ಇದನ್ನೆಲ್ಲಾ ಎಲ್ಲರೂ ಒಂದೇ ಸಲ ಮಾಡಿಬಿಡುತ್ತಾರೆಂದಾಗಲಿ, ಕೆಲವರಾದರೂ ಗಿರಣಿ ಪದಾರ್ಥಗಳನ್ನು ಒಂದೇ ಸಲ ಬಿಡುತ್ತಾರೆಂದಾಗಲಿ ಅಲ್ಲ. ಅದು ಅಸಂಭವ. ಆದರೆ ಈ ವಿಚಾರ ಸರಿ ಎಂದರೆ ನಾವು ಯಾವುದನ್ನು ಬಿಡಬೇಕೋ ತಿಳಿಯುತ್ತದೆ. ಕ್ರಮೇಣ ಅದರ ಬಳಕೆಯನ್ನು ಬಿಟ್ಟುಬಿಡಬಹುದು. ಕೆಲವರು ಮಾಡಿದುದನ್ನು ಅನೇಕರು ನೋಡಿ ಅನುಕರಿಸುತ್ತಾರೆ. ಹಾಗೆ ಗಣಿತದ ಲೆಕ್ಕಾಚಾರದಂತೆ ಚಳವಳಿ ಬೆಳೆಯುತ್ತದೆ. ಮುಂದಾಳುಗಳು ಹೇಗೆ ಮಾಡಿದರೆ ಜನತೆ ಸಂತೋಷದಿಂದ ಹಾಗೇ ಮಾಡುತ್ತದೆ. ಇದರಲ್ಲಿ ಯಾವ ತೊಡಕು

ಇಲ್ಲ. ಉಳಿದವರು ನಮ್ಮ ಹಾಗೆ ಮಾಡುವವರೆಗೆ ನಾವು ದಾರಿ ಕಾಯುತ್ತ ಕೂಡಬೇಕಾಗಿಲ್ಲ. ಮಾಡದಿದ್ದವರು ಕೆಟ್ಟರು. ಸತ್ಯವನ್ನರಿತರೂ ಹಾಗೆ ಮಾಡದಿದ್ದವರು ಹೇಡಿಗಳು.

**ಓದುಗ :** ಹಾಗಾದರೆ ಟ್ರಾಂ, ವಿದ್ಯುತ್ ಇವುಗಳ ಮಾತೇನು?

**ಸಂಪಾದಕ :** ಈಗ ಪ್ರಶ್ನೆ ಬಹಳ ತಡವಾಗಿ ಬಂತು. ಈಗ ಇದರಲ್ಲೇನು ಹುರುಳಿದೆ? ರೈಲ್ವೇ ಬೇಡ ಎನ್ನುವವರಿಗೆ ಟ್ರಾಂ ಬೇಕೆ? ಯಂತ್ರ-ಕಾರಖಾನೆ ಹಾವಿನ ಹುತ್ತದಂತೆ. ಒಳಗೆ ಒಂದಕ್ಕೊಂದು ಸುತ್ತಿಕೊಂಡು ನೂರಾರು ಹಾವು. ಕಾರಖಾನೆ ಎಂದರೆ ದೊಡ್ಡ ನಗರಗಳು ಇರಲೇಬೇಕು! ದೊಡ್ಡ ನಗರಗಳಿದ್ದಲ್ಲಿ ಟ್ರಾಂ ರೈಲು ಇರಲೇಬೇಕು. ಅಲ್ಲಿಯೆ ವಿದ್ಯುದ್ದೀಪವೂ. ಇಂಗ್ಲಿಷ್ ಹಳ್ಳಿಗಳಲ್ಲಿ ಇಂಥವು ಯಾವುದೂ ಇಲ್ಲ. ಈ ಟ್ರಾಂ ಮುಂತಾದ ವೇಗದ ವಾಹನಗಳು ಹೆಚ್ಚಾದ ಕಡೆ ಜನಗಳ ಆರೋಗ್ಯ ಕೆಟ್ಟಿದೆ ಎಂದು ಪ್ರಾಮಾಣಿಕರಾದ ವೈದ್ಯರು ಹೇಳುತ್ತಾರೆ. ಯೂರೋಪಿನ ಪಟ್ಟಣವೊಂದರಲ್ಲಿ ಹಣದ ಅಭಾವವಾದಾಗ ಟ್ರಾಮಿನ, ವಕೀಲರ, ವೈದ್ಯರ ವರಮಾನ ಇಳಿದುಹೋಯಿತು. ಜನರ ಆರೋಗ್ಯ ಉತ್ತಮವಾಯಿತು-ನನಗೆ ನೆನಪಿದೆ. ಗಿರಣಿ ಕಾರಖಾನೆಗಳ ವಿಷಯದಲ್ಲಿ ಒಂದಾದರೂ ಒಳ್ಳೆಯ ಅಂಶ ನನಗೆ ನೆನಪಾಗುವುದಿಲ್ಲ. ಅದರ ಕೆಡುಕನ್ನು ಕುರಿತು ಗ್ರಂಥಗಳನ್ನೆ ಬರೆಯಬಹುದು.

ಓದುಗ : ನೀವು ಹೇಳುವುದೆಲ್ಲ ಅಚ್ಚಿನ ಯಂತ್ರದಿಂದ ತಾನೆ ಅಚ್ಚಾಗಬೇಕು. ಇದೇನು ಒಳ್ಳೆಯ ಅಂಶವೋ, ಕೆಟ್ಟ ಅಂಶವೊ?

**ಸಂಪಾದಕ :** ವಿಷಕ್ಕೆ ವಿಷವೇ ಕೆಲವು ಸಲ ಮದ್ದು. ಹಾಗಿದೆ ಇದು. ಆದುದರಿಂದ ಇದು ಯಂತ್ರ-ಕಾರಖಾನೆಗಳ ಬಗ್ಗೆ ಒಳ್ಳೆಯ ಅಂಶವಲ್ಲ. ಸಾಯುವಾಗಲೂ ಯಂತ್ರ ನಮಗೆ ಹೇಳುತ್ತದೆ.

'ಜೋಕೆ, ನನ್ನ ಸಹವಾಸ ಮಾಡಬೇಡಿ. ನನ್ನಿಂದ ನಿಮಗೆ ಏನೂ ಉಪಕಾರವಿಲ್ಲ. ಅಚ್ಚಿನಿಂದ ಏನಾದರೂ ಲಾಭವಾದರೆ ಅದು ಈ ಯಂತ್ರದ ಪಿಶಾಚಿ ಹಿಡಿದಿರುವವರಿಗೆ ಮಾತ್ರ.'

ಆದುದರಿಂದ ಮುಖ್ಯವಾದ ಮಾತನ್ನು ಮರೆಯಬೇಡಿ. ಯಂತ್ರ ಗಿರಣಿ

ಒಳ್ಳೆಯದಲ್ಲ, ಕೆಟ್ಟದ್ದು ಎಂಬುದನ್ನು ಅರಿಯುವುದು ಅಗತ್ಯ. ಆಮೇಲೆ ಕ್ರಮಕ್ರಮವಾಗಿ ಅದನ್ನು ವರ್ಜ್ಯಮಾಡಬಹುದು. ಇಚ್ಛಾಮಾತ್ರದಿಂದಲೇ ನಮಗೆ ಒಂದು ವಸ್ತು ಸಿಗುವಂಥ ಸುಲಭ ಮಾರ್ಗವನ್ನು ಪ್ರಕೃತಿ ಏರ್ಪಡಿಸಿಲ್ಲ. ಯಂತ್ರವನ್ನು ವರಪ್ರಸಾದ ಎನ್ನದೆ ಕೆಟ್ಟ ಪದಾರ್ಥ ಎಂದು ಅರಿತರೆ ಸಾಕು. ಕಟ್ಟಕಡೆಗೆ ಅದು ತಾನೇ ನಾಶವಾಗುತ್ತದೆ.

■

## ಅಧ್ಯಾಯ – 20

# ಉಪಸಂಹಾರ

**ಓದುಗ :** ನಿಮ್ಮ ಮಾತನ್ನು ಕೇಳಿದರೆ, ನೀವು ಮೂರನೆಯ ಪಕ್ಷವೊಂದನ್ನು ಪ್ರಾರಂಭಿಸುವ ಹಾಗೆ ಇದೆ. ನೀವು ಮಿತವಾದಿಗಳೂ ಅಲ್ಲ, ಅತಿವಾದಿಗಳೂ ಅಲ್ಲ.

**ಸಂಪಾದಕ :** ಅದೇ ತಪ್ಪು. ನನ್ನ ಮನಸ್ಸಿನಲ್ಲಿ ಮೂರನೆಯ ಪಕ್ಷದ ಮಾತೇ ಇಲ್ಲ, ನಾವೆಲ್ಲರೂ ಒಂದೇ ಬಗೆಯ ವಿಚಾರದವರಲ್ಲ, ಮಿತವಾದಿಗಳು ಎಲ್ಲರೂ ಒಂದೇ ಅಭಿಪ್ರಾಯದವರು ಎಂದು ಹೇಳಲಾರೆ. ಅಲ್ಲದೆ, ಸೇವೆ ಮಾಡಬೇಕೆನ್ನುವವರಿಗೆ ಪಕ್ಷಗಳನ್ನು ಕಟ್ಟಿಕೊಂಡೇನು? ನಾನಂತೂ ಅತಿವಾದಿ, ಮಿತವಾದಿ ಇಬ್ಬರಿಗೂ ಸೇವಕ. ಅವರಿಗೂ ನನಗೂ ಮತಭೇದವಾದಲ್ಲಿ ವಿನಯದಿಂದ ನನ್ನ ವಿಚಾರಗಳನ್ನು ತಿಳಿಸಿ, ಅವರ ಸೇವೆ ಮಾಡುತ್ತಲೇ ಇರುತ್ತೇನೆ.

**ಓದುಗ :** ಈ ಎರಡು ಪಕ್ಷದವರಿಗೆ ನೀವೇನು ಹೇಳುತ್ತೀರಿ?

**ಸಂಪಾದಕ:** ಉಗ್ರಪಂಥಿಗಳಿಗೆ, 'ಹಿಂದೂಸ್ಥಾನಕ್ಕೆ ಸ್ವರಾಜ್ಯ ತರಬೇಕೆಂದು ನಿಮಗೆ ಆಸೆ. ಆದರೆ ಕೇಳಿದ ಮಾತ್ರಕ್ಕೆ ಯಾರು ಸ್ವರಾಜ್ಯ ಕೊಡುತ್ತಾರೆ? ಪ್ರತಿಯೊಬ್ಬನೂ ತನ್ನ ಸ್ವರಾಜ್ಯವನ್ನು ತಾನೇ ಗಳಿಸಬೇಕು. ಪರರು ಗಳಿಸಿಕೊಟ್ಟದ್ದು ಸ್ವರಾಜ್ಯವಲ್ಲ. ಪರರಾಜ್ಯ. ಆದುದರಿಂದ ಇಂಗ್ಲಿಷರನ್ನು ಓಡಿಸಿದ ಮಾತ್ರಕ್ಕೆ ಸ್ವರಾಜ್ಯ ಬಂತು ಎಂದು ನೀವು ತಿಳಿದರೆ ಅದು ಸರಿಯಲ್ಲ. ಸ್ವರಾಜ್ಯವೆಂದರೆ ಏನೋ ಆಗಲೇ ನಾನೂ ಹೇಳಿದ್ದೇನೆ. ಗುಂಡು ಮದ್ದಿನಿಂದ ಪಶುಬಲದಿಂದ ಅದು ಸಿಗಲಾರದು. ಪಶುಬಲ ಹಿಂದೂಸ್ಥಾನಕ್ಕೆ ಸಹಜವಲ್ಲ. ಆದುದರಿಂದ ನೀವು ಸತ್ಯಾಗ್ರಹವನ್ನೇ ನಂಬಬೇಕು. ಸ್ವರಾಜ್ಯಕ್ಕಾಗಿ ಮದ್ದುಗುಂಡು. ಪಶುಬಲ ಅಗತ್ಯ ಎಂಬುದನ್ನು ಯೋಚಿಸಲೇಬಾರದು' ಎಂದು ಹೇಳುತ್ತೇನೆ.

ಬರೀ ಬಿನ್ನಹ ಮಾಡುವುದು ಅವಮಾನಕರ; ನಮ್ಮ ಹೀನತೆಯನ್ನು ನಾವೇ ಒಪ್ಪಿಕೊಂಡಂತೆ. ಬ್ರಿಟಿಷ್ ಆಡಳಿತ ಅನಿವಾರ್ಯ ಎಂದರೆ ನಾವು ನಾಸ್ತಿಕರು ಎಂದ ಹಾಗೆ. ದೇವರು ವಿನಾ ಉಳಿದುದು ಯಾವುದೂ, ಉಳಿದವರು ಯಾರೂ ಅನಿವಾರ್ಯವಲ್ಲ. ಅದಲ್ಲದೆ, ಇಂಗ್ಲಿಷರ ಹೊರತು ಹಿಂದೂಸ್ಥಾನದಲ್ಲಿ ಕೆಲಸ ನಡೆಯದು ಎಂದು ಹೇಳುವುದು ಅವರಿಗೆ ಅಹಂಕಾರ ಕಾರಣವಾಗುತ್ತದೆ. ಸಾಮಾನ್ಯ ಬುದ್ಧಿಗೂ ಇದು ಅರ್ಥವಾಗುತ್ತದೆ. ಇಂಗ್ಲಿಷರು ತಮ್ಮ ಹಾಸಿಗೆ-ಚಾಪೆ ಸುತ್ತಿಕೊಂಡು ಹೊರಟು ಹೋದರೆ ಹಿಂದುಸ್ಥಾನವೇನು ಅನಾಥ ವಾಗುತ್ತದೆಯೇ, ತಬ್ಬಲಿಯಾಗುತ್ತದೆಯೆ'.

'ಅವರಿಗೆ ಹೆದರಿ ಈಗ ಸುಮ್ಮನೆ ಕುಳಿತಿರುವವರು ಆಗ ಹೊಡೆದಾಡಿಯಾರು. ಆದರೆ ಜ್ವಾಲಾಮುಖಿಯನ್ನು ಒತ್ತಿಹಿಡಿದರೆ ಏನು ಲಾಭ? ಅದು ಒಡೆದು ಹೊರಗೆ ಬರುವುದೇ ಒಳಿತು. ಆದುದರಿಂದ ಶಾಂತಿಪೂರ್ಣವಾಗಿ ಬಾಳುವ ಮುನ್ನ ನಾವು ನಮ್ಮೊಳಗೆ ಹೊಡೆದಾಡಲೇಬೇಕಾಗಿದ್ದರೆ ಹಾಗೆಯೇ ಆಗಲಿ. ಬಲಹೀನರನ್ನು ರಕ್ಷಿಸುವ ನೆಪದಲ್ಲಿ ಇಬ್ಬರ ನಡುವೆ ಮೂರನೆಯ ಲಾಭ ಬಡಕ ಬೇಕಾಗಿಲ್ಲ. ಈ ಸಂರಕ್ಷಣೆ ಎನ್ನುವುದೇ ನಮ್ಮನ್ನು ನಿಸ್ಸತ್ವ ಮಾಡಿದೆ. ಇಂಥ ಸಂರಕ್ಷಣೆ ದುರ್ಬಲರನ್ನು ಮತ್ತಿಷ್ಟು ನಿರ್ಬಲರಾಗಿ ಮಾಡುತ್ತದೆ. ಇದನ್ನು ಅರಿಯದಿದ್ದರೆ ನಮಗೆ ಸ್ವರಾಜ್ಯ ಸಿಗಲಾರದು. ಇಂಗ್ಲಿಷ್ ಪಾದರಿಯೊಬ್ಬ ಹೇಳಿದುದನ್ನೇ ನಾನೂ ಹೇಳುತ್ತೇನೆ; ಪರರಾಜ್ಯದ ಸುವ್ಯವಸ್ಥೆಗಿಂತ ಸ್ವರಾಜ್ಯದ ಅವ್ಯವಸ್ಥೆಯೇ ಲೇಸು. ಇಷ್ಟೆ ಭೇದ-ಸ್ವರಾಜ್ಯಕ್ಕೆ ಆತ ಮಾಡಿದ ಅರ್ಥ ಬೇರೆ, ನಾನು ಹಿಂದೂಸ್ಥಾನದ ಸ್ವರಾಜ್ಯಕ್ಕೆ ಹೇಳುವ ಅರ್ಥ ಬೇರೆ. ಇಂಗ್ಲಿಷರದಾಗಲಿ, ಭಾರತೀಯರದಾಗಲಿ, ಯಾರ ದಬ್ಬಾಳಿಕೆಯೂ ನಮಗೆ ಬೇಡ ಎಂಬುದ್ನು ನಾವು ತಿಳಿಸಿ ಹೇಳಬೇಕು' ಎಂದು ಮಿತವಾದಿಗಳಿಗೆ ಹೇಳುತ್ತೇನೆ.

ಹೀಗಾದರೆ ಮಿತವಾದಿಗಳೂ, ಅತಿವಾದಿಗಳೂ ಒಟ್ಟುಗೂಡಬಹುದು. ಆಗ ಪರಸ್ಪರ ಅಂಜುವ ಅಥವಾ ಅವಿಶ್ವಾಸ ತೋರುವ ಕಾರಣವಿರದು.

**ಓದುಗ** : ಆಮೇಲೆ ಇಂಗ್ಲಿಷರಿಗೇನು ಹೇಳುತ್ತೀರಿ?

**ಸಂಪಾದಕ** : ವಿನಯಪೂರ್ವಕ ಅವರಿಗೆ ಹೇಳುತ್ತೇನೆ: 'ನೀವು ನಮ್ಮ

ಆಡಳಿತಗಾರರು. ನಿಜ, ನಿಮ್ಮ ಕತ್ತಿಯ ಬಲದಿಂದಲೋ ಅಥವಾ ನಮ್ಮ ಸಮ್ಮತಿಯಿಂದಲೋ ನೀವು ಹಿಂದೂಸ್ಥಾನದಲ್ಲಿರುವುದು ಎಂಬ ಚರ್ಚೆ ಬೇಡ. ನೀವು ನಮ್ಮ ದೇಶದಲ್ಲಿದ್ದರೆ ನನಗೇನೂ ಅಡ್ಡಿಯಿಲ್ಲ. ಆದರೆ ನೀವು ಆಡಳಿತಗಾರರಾದರೂ ಪ್ರಜಾಸೇವಕರಂತೆ ಇರಬೇಕು. ನೀವು ಹೇಳಿದಂತೆ ನಾವು ಮಾಡಬೇಕಾಗಿಲ್ಲ. ನಾವು ಬಯಸಿದಂತೆ ನೀವು ಮಾಡಬೇಕು. ಇದುವರೆಗೆ ನೀವು ಇಲ್ಲಿಂದ ಹೊತ್ತುಕೊಂಡು ಹೋದ ಐಶ್ವರ್ಯ ನಿಮ್ಮಲ್ಲಿಯೇ ಇರಲಿ. ಇನ್ನು ಮುಂದೆ ಮಾತ್ರ ಹಾಗೆ ಮಾಡುವ ಹಾಗಿಲ್ಲ. ಇಲ್ಲಿ ಇರುವ ಹಾಗಿದ್ದರೆ ನಿಮ್ಮ ಕೆಲಸ ಹಿಂದೂಸ್ಥಾನದ ಕಾವಲು. ಅಷ್ಟೆ ನಮ್ಮಿಂದ ಲಾಭ ಗಳಿಸಿಕೊಳ್ಳಬೇಕು ಎಂಬ ಆಸೆಯನ್ನು ಬಿಡಿ. ನೀವು ನಂಬಿದ ಸಭ್ಯತೆ ನಮ್ಮ ಪಾಲಿಗೆ ಅಸಭ್ಯತೆ. ನಿಮ್ಮದಕ್ಕಿಂತ ನಮ್ಮ ಸಭ್ಯತೆ ಬಹಳ ಶ್ರೇಷ್ಠವೆಂದು ನಾವು ತಿಳಿದಿದ್ದೇವೆ. ಇದನ್ನು ನೀವು ಅರಿತರೆ ನಿಮಗೇ ಲಾಭ. ಇಲ್ಲವಾದರೆ ನಿಮ್ಮದೇ ಗಾದೆಯಿದೆಯಲ್ಲ. ನಮ್ಮ ದೇಶದಲ್ಲಿ ಇರಬೇಕೆಂದರೆ ನಮ್ಮಂತೆಯೇ ಇರಬೇಕು. ನಮ್ಮ ಧರ್ಮಕ್ಕೆ ಬಾಧಕವಾದುದನ್ನು ಏನನ್ನೂ ನೀವು ಮಾಡಲಾಗದು, ಆಡಳಿತಗಾರರಾದ್ದರಿಂದ ಇಲ್ಲಿನ ಹಿಂದೂಗಳಿಗಾಗಿ ನೀವು ಗೋಮಾಂಸವನ್ನೂ ಮುಸಲ್ಮಾನರಿಗಾಗಿ ಹಂದಿಯ ಮಾಂಸವನ್ನೂ ಬಿಟ್ಟುಬಿಡಬೇಕು. ಇದುವರೆಗೆ ನಾವು ಏನೂ ಹೇಳಲಿಲ್ಲ. ನೀವು ನಮ್ಮನ್ನು ತುಳಿದಿದ್ದೀರಿ. ಆದರೆ ನಿಮ್ಮ ನಡತೆಯಿಂದ ನಮಗೆ ನೋವಾಗಿಲ್ಲ ಎಂದು ತಿಳಿಯಬೇಡಿ. ಸ್ವಾರ್ಥದಿಂದಲೋ ಭಯದಿಂದಲೋ ನಾವು ನಮ್ಮ ಮನಸ್ಸನ್ನು ಬಿಚ್ಚಿ ಹೇಳಲಿಲ್ಲ. ಈಗ ಧೈರ್ಯವಾಗಿ ಹೇಳಲೇಬೇಕು; ಅದು ನಮ್ಮ ಕರ್ತವ್ಯ. ನಿಮ್ಮ ಶಾಲೆ, ನ್ಯಾಯಾಲಯಗಳು ಶುದ್ಧ ನಿಷ್ಪ್ರಯೋಜಕ. ನಮ್ಮ ಹಳೆಯ ಪಾಠಶಾಲೆಗಳನ್ನೂ ನ್ಯಾಯಾಲಯಗಳನ್ನೂ ಮತ್ತೆ ಸ್ಥಾಪಿಸುತ್ತೇವೆ. ಹಿಂದೂಸ್ಥಾನದ ಸಾಮಾನ್ಯ ಭಾಷೆ ಇಂಗ್ಲಿಷಲ್ಲ ಹಿಂದಿ. ಆದುದರಿಂದ ಅದನ್ನು ನೀವು ಕಲಿಯಬೇಕು. ನಮ್ಮ ಭಾಷೆಯಲ್ಲಿಯೇ ನಾವು ನಿಮ್ಮೊಡನೆ ವ್ಯವಹಾರ ಮಾಡಿಯೇವು.'

'ರೈಲಿಗೆ, ಸೇನೆಗೆ ನೀವು ಮನ ಬಂದಂತೆ ಮಾಡುತ್ತಿರುವ ವೆಚ್ಚ ನಮಗೆ ಸಹಿಸದು. ನಮಗೆ ಇವೆರಡೂ ಅಗತ್ಯವಿಲ್ಲ. ನಿಮಗೆ ರಷ್ಯಾದ ಅಂಜಿಕೆ ಇರಬಹುದು. ನಮಗಿಲ್ಲ. ರಷ್ಯಾದವರು ಬರಲಿ, ಬಂದಾಗ ನೋಡಿಕೊಳ್ಳುತ್ತೇವೆ. ನೀವೂ ಜೊತೆಗೆ

ಇದ್ದರೆ ಇಬ್ಬರೂ ಸೇರಿ ಅವರನ್ನು ನೋಡಿಕೊಳ್ಳೋಣ. ನಮಗೆ ವಿಲಾಯಿತಿ ಬಟ್ಟೆ ಅಗತ್ಯವಿಲ್ಲ. ನಮ್ಮ ದೇಶದಲ್ಲಿಯೇ ಮಾಡಿದ ಪದಾರ್ಥಗಳೇ ನಮಗೆ ಸಾಕು. ನಿಮಗೆ ಒಂದು ಕಣ್ಣು ಮ್ಯಾಂಚೆಸ್ಟರ್ ಮೇಲೆ, ಇನ್ನೊಂದು ನಮ್ಮ ಮೇಲೆ. ಇದನ್ನು ನಾವು ಸಹಿಸಲಾರೆವು. ನಿಮ್ಮ ಹಿತವೂ ನಮ್ಮ ಹಿತವೂ ಒಂದೇ ಆದರೆ ಮಾತ್ರ ನಾವು ಒಟ್ಟಿಗೆ ನಿರ್ವಹಿಸಬಹುದು.'

"ಉದ್ದಂಡತನದಿಂದ ಇದನ್ನು ಹೇಳುತ್ತಿಲ್ಲ. ನಿಮಗೆ ಬೇಕಾದಷ್ಟು ಶಸ್ತ್ರಬಲವಿದೆ. ನೌಕಾಬಲವಿದೆ. ಈ ಬಲದ ವಿರುದ್ಧ ನಾನು ಹೊಡೆದಾಡಲಾರೆವು. ಆದರೆ ಮೇಲೆ ಹೇಳಿದ ಮಾತು ನಿಮಗೆ ಇಷ್ಟವಿಲ್ಲದಿದ್ದರೆ, ನಾವು ನಿಮ್ಮ ಕೈಯೊಳಗೆ ಇರಲಾರೆವು. ನಿಮ್ಮ ಪ್ರಜೆಯಾಗಿ ಇರಲಾರೆವು. ನೀವು ನಮ್ಮನ್ನು ತುಂಡು ತುಂಡಾಗಿ ಕತ್ತರಿಸಿದರೂ ಸರಿಯೆ. ಗುಂಡಿನ ಬಾಯಿಗಿಟ್ಟು ಸುಟ್ಟರೂ ಸರಿಯೆ. ನಮ್ಮ ಇಷ್ಟಕ್ಕೆ ವಿರುದ್ಧವಾಗಿ ನಡೆದರೆ ನಿಮಗೆ ನಾವು ತಿಲಮಾತ್ರವೂ ಸಹಾಯ ಮಾಡೆವು. ನಮ್ಮ ಸಹಾಯವಿಲ್ಲದೆ ನೀವು ಒಂದು ಹೆಜ್ಜೆಯನ್ನು ಹಾಕಲಾರಿರಿ ಎಂಬುದೂ ನಮಗೆ ಗೊತ್ತು.

"ನಿಮ್ಮ ಅಧಿಕಾರ ಮದದಲ್ಲಿ ಇದನ್ನು ಕೇಳಿ ನೀವು ನಗುತ್ತೀರಿ. ಒಂದೇ ಸಲಕ್ಕೆ ನಿಮ್ಮ ಭ್ರಾಂತಿ ನಿರಸನ ಮಾಡುವುದು ನಮಗೆ ಸಾಧ್ಯವಾಗಲಿಕ್ಕಿಲ್ಲ. ಆದರೆ ನಮ್ಮೊಳಗೆ ಪೌರುಷವೇನಾದರೂ ಇದ್ದರೆ ನಿಮ್ಮ ಈ ಮದ ಆತ್ಮಘಾತಕ, ನಿಮ್ಮ ನಗೆ ಬರೀ ವಿಪರೀತ ಬುದ್ಧಿ ಎಂಬುದು ಬಹು ಬೇಗ ನಿಮಗೇ ಕಂಡುಬಂದೀತು. ನೀವೂ ಒಂದು ಧಾರ್ಮಿಕ ಜನಾಂಗದವರು ಎಂದು ನಾವು ತಿಳಿದಿದ್ದೇವೆ. ನಮ್ಮ ದೇಶವೋ ಸಮಸ್ತ ಧರ್ಮದ ತವರು. ನಾವೂ ನೀವೂ ಹೇಗೆ ಕಲೆತೆವು ಎಂಬ ವಿಚಾರ ಬೇಡ. ನಮ್ಮ ಪರಸ್ಪರ ಸಂಬಂಧವನ್ನು ಒಳ್ಳೆಯ ಕಾರ್ಯಕ್ಕೆ ಉಪಯೋಗಿಸೋಣ.

"ಹಿಂದೂಸ್ಥಾನಕ್ಕೆ ಬಂದಿರುವ ನೀವು ಇಂಗ್ಲಿಷ್ ಜನಾಂಗದ ಒಳ್ಳೆಯ ಮಾದರಿಗಳಲ್ಲ. ಅರೆ ಬರೆ ಇಂಗ್ಲಿಷರಾದ ನಾವೂ ನಿಜವಾದ ಹಿಂದೂಸ್ಥಾನದ ಪ್ರತಿನಿಧಿಗಳಲ್ಲ. ನೀವು ಮಾಡಿರುವುದೆಲ್ಲ ಇಂಗ್ಲಿಷ್ ಜನಕ್ಕೆ ತಿಳಿದರೆ ಅದನ್ನು ಅವರು ವಿರೋಧಿಸಿಯಾರು. ಹಿಂದೂಸ್ಥಾನದ ಜನತೆಗೂ ನಿಮಗೂ ಸಂಬಂಧವೇ ಇಲ್ಲ. ನಿಮ್ಮ ಈ ನಾಗರಿಕತೆಯನ್ನು ಬಿಟ್ಟು ನಿಮ್ಮ ಧರ್ಮಶಾಸ್ತ್ರಗಳನ್ನು ತಿರುವಿ

ಹಾಕಿದರೆ ನಾವು ಕೇಳುವುದೆಲ್ಲ ನ್ಯಾಯ ಎಂಬುದು ತಿಳಿಯುತ್ತದೆ. ನಮ್ಮ ಈ ಬೇಡಿಕೆಗಳನ್ನು ಪೂರೈಯಿಸಿದರೆ ಮಾತ್ರ, ನೀವು ಹಿಂದೂಸ್ಥಾನದಲ್ಲಿ ಇರಬಹುದು. ಆ ರೀತಿ ನೀವು ಇಲ್ಲಿದ್ದರೆ ನಿಮ್ಮಿಂದ ನಾವು ಎಷ್ಟೋ ಕಲಿತೇವು. ನಮ್ಮಿಂದಲೂ ನೀವು ಕಲಿಯಬಹುದು. ಅದರಿಂದ ಪರಸ್ಪರ ಲಾಭವಾಗಿ ಜಗತ್ತಿಗೂ ಹಿತವಾದೀತು. ಆದರೆ ನಮ್ಮ ನಿಮ್ಮ ಸಂಬಂಧ ಧರ್ಮದ ಆಧಾರದ ಮೇಲೆ ನಿಂತಾಗಲೇ ಇದು ಸಾಧ್ಯ

**ಓದುಗ :** ರಾಷ್ಟ್ರಕ್ಕೆ ಏನು ಹೇಳುತ್ತೀರಿ?

**ಸಂಪಾದಕ :** ರಾಷ್ಟ್ರವೇನು ಬಂತು?

**ಓದುಗ:** ನಾವೂ ನೀವೂ ಯಾವ ಅರ್ಥದಲ್ಲಿ ಆ ಶಬ್ದವನ್ನು ಉಪಯೋಗಿಸುತ್ತೇವೋ ಅದು. ಸದ್ಯ, ಯುರೋಪಿನ ನಾಗರಿಕತೆಗೆ ಬಲಿಯಾಗಿ ಸ್ವರಾಜ್ಯ ಬೇಕು ಎಂದು ಕೂಗುತ್ತಿರುವ ನಾವು ರಾಷ್ಟ್ರ.

**ಸಂಪಾದಕ :** ಅವರಿಗೆ ಹೀಗೆ ಹೇಳುತ್ತೇನೆ: "ಭಾರತೀಯರಲ್ಲಿ ಯಾರಿಗೆ ನಿಜವಾದ ಪ್ರೇಮ ಇದೆಯೋ ಅವರು ಇಂಗ್ಲಿಷರೊಡನೆ ಮೇಲೆ ಹೇಳಿದಂತೆ ಅಂಜಿಕೆಯಿಲ್ಲದೆ ಮಾತಾಡಬಲ್ಲರು. ಭಾರತೀಯ ಸಭ್ಯತೆಯೇ ಸರ್ವೋತ್ತಮ, ಐರೋಪ್ಯ ನಾಗರಿಕತೆ ಮೂರು ದಿನದ ಮೋಜು ಎಂದು ವಿಚಾರಪೂರ್ವಕ ನಂಬಿದವರೇ ಹಾಗೆ ಮಾಡಬಲ್ಲರು. ಇಂಥ ನೀರುಗುಳ್ಳೆಯ ನಾಗರಿಕತೆಗಳು ಕಾಲಕಾಲಕ್ಕೆ ಎಷ್ಟೋ ಬಂದಿವೆ. ಹೋಗಿವೆ. ಮುಂದೆಯೂ ಬರುತ್ತವೆ ಹೋಗುತ್ತವೆ. ನಿಜವಾಗಿ ಆತ್ಮಬಲವನ್ನು ತಮ್ಮೊಳಗೆ ಅನುಭವಿಸಿ ಪಶುಬಲಕ್ಕೆ ಅಂಜದೆ. ಪಶುಬಲವನ್ನು ಉಪಯೋಗಿಸಲು ಬಯಸದವರು ಮಾತ್ರವೇ ಹಾಗೆ ಹೇಳಬಲ್ಲರು. ಯಾರು ದುಃಖದ ವಿಷವನ್ನು ಕುಡಿದು ಈಗಿನ ದುರ್ದಸೆಯಿಂದ ಬಹಳ ಹೆಚ್ಚು ಅಂಸತುಷ್ಟರಾಗಿದ್ದಾರೋ ಅವರು ಮಾತ್ರ ಹಾಗೆ ಹೇಳಬಲ್ಲರು.

'ಅಂಥ ಭಾರತೀಯ ಒಬ್ಬನೇ ಒಬ್ಬ ಇದ್ದರೂ ಅವನು ಇಂಗ್ಲಿಷರಿಗೆ ಹಾಗೆ ಹೇಳಿಯಾನು. ಇಂಗ್ಲಿಷರು ಅವನ ಮಾತನ್ನು ಕೇಳಲೇಬೇಕಾದೀತು.'

ಇವು ಬೇಡಿಕೆಗಳಲ್ಲ. ಆದರೆ ನಮ್ಮ ಮನಃಸ್ಥಿತಿಯ ಸೂಚಿಕೆ. ಬೇಡಿದರೆ

ಏನೂ ಸಿಗದು. ಬೇಕಾದುದನ್ನು ನಾವು ತೆಗೆದುಕೊಳ್ಳಬೇಕು. ತೆಗೆದುಕೊಳ್ಳಲು ನಮಗೆ ಶಕ್ತಿ ಬೇಕು. ಆ ಶಕ್ತಿ ಬರಲು ಕೆಳಗೆ ಹೇಳುವಂತೆ ನಡೆಯಬೇಕು.

1) ವಿಧಿಯಿಲ್ಲದಿದ್ದಾಗ ಮಾತ್ರ ನಾವು ಇಂಗ್ಲಿಷು ಭಾಷೆಯನ್ನು ಬಳಸಬೇಕು.

2) ವಕೀಲನಾದರೆ ವಕೀಲಿಯನ್ನು ಬಿಟ್ಟು ಕೈಮಗ್ಗವನ್ನು ಹಿಡಿಯಬೇಕು.

3) ವಕೀಲನಾದರೆ, ತನ್ನ ಜ್ಞಾನವನ್ನು ನಮ್ಮ ಜನಕ್ಕೂ ಇಂಗ್ಲಿಷರಿಗೂ ತಿಳಿಸಿ ಹೇಳಲು ಉಪಯೋಗಿಸಬೇಕು;

4) ವಕೀಲನಾದರೆ, ಕಕ್ಷಿಗಳು ಜಗಳದಲ್ಲಿ ಕೈಹಾಕದೆ ನ್ಯಾಯಾಲಯವನ್ನು ತ್ಯಜಿಸಿ, ಉಳಿದವರನ್ನೂ ಹಾಗೆ ಮಾಡುವಂತೆ ತನ್ನ ಅನುಭವದಿಂದ ಹೇಳಬೇಕು;

5) ವಕೀಲನಾದರೆ ನ್ಯಾಯಧಿಪತಿ ಕೆಲಸವನ್ನೂ ಬಿಡಬೇಕು;

6) ವೈದ್ಯನಾದರೆ ವೈದ್ಯವೃತ್ತಿಯನ್ನು ಬಿಟ್ಟು ದೇಹದ ರೋಗಕ್ಕಿಂತ ಆತ್ಮದ ರೋಗವನ್ನು ಗುಣ ಮಾಡುವುದು ಅಗತ್ಯ ಎಂಬುದನ್ನು ಅರಿಯಬೇಕು;

7) ವೈದ್ಯನಾದರೆ, ತನ್ನದು ಯಾವುದೇ ಧರ್ಮವಾಗಲಿ, ವಿಲಾಯಿತಿಯ ವೈದ್ಯ ಶಾಲೆಗಳಲ್ಲಿ ರೂಢಿಯಲ್ಲಿರುವ ಜೀವ ಜಂತುಗಳ ಅಂಗ ವಿಚ್ಛೇದನದ ರಾಕ್ಷಸೀ ಪದ್ಧತಿಯ ಮೂಲಕ ರೋಗವನ್ನು ಗುಣಪಡಿಸುವುದಕ್ಕಿಂತ ಈ ದೇಶ ರೋಗಗ್ರಸ್ತವಾಗಿದ್ದರೂ ಚಿಂತೆಯಿಲ್ಲ ಎಂಬುದನ್ನು ಅರಿತಾನು;

8) ವೈದ್ಯನಾದರೂ ಕೈಮಗ್ಗವನ್ನು ನಡೆಸಬೇಕು. ತನ್ನ ಬಳಿಗೆ ರೋಗಿಗಳು ಬಂದರೆ ಆ ರೋಗದ ಕಾರಣವನ್ನು ತಿಳಿಸಿ ಆ ಕಾರಣವನ್ನು ನಾಶಗೊಳಿಸುವಂತೆ ಬುದ್ಧಿ ಹೇಳಬೇಕು. ನಿರರ್ಥಕ ಔಷಧವನ್ನು ಸೇವಿಸದೆ ಒಂದು ವೇಳೆ ರೋಗಿ ಸತ್ತರೆ ಜಗತ್ತಿಗೇನೂ ನಷ್ಟವಿಲ್ಲ. ತಾನು ರೋಗಿಗೇ ನಿಜವಾಗಿ ದಯೆ ತೋರಿದಂತೆ ಎಂಬುದನ್ನು ಅರಿಯಬೇಕು;

9) ಶ್ರೀಮಂತನಾದರೂ ತನ್ನ ಐಶ್ವರ್ಯದ ಚಿಂತೆ ಇಲ್ಲದೆ ನಿರ್ಭಯವಾಗಿ ಮನಸ್ಸಿನಲ್ಲಿದ್ದುದನ್ನು ಹೇಳಬೇಕು;

10) ಶ್ರೀಮಂತನಾದರೆ, ತನ್ನ ಹಣವನ್ನು ಕೈಮಗ್ಗಗಳನ್ನು ನೆಲೆಗೊಳಿಸುವುದಕ್ಕೆ ವೆಚ್ಚ ಮಾಡಬೇಕು. ತಾನು ಕೈಯಿಂದ ಮಾಡಿದ ಪದಾರ್ಥಗಳನ್ನು ತೊಟ್ಟು ಇತರರನ್ನೂ ಅದೇ ರೀತಿ ಮಾಡುವಂತೆ ಪ್ರೋತ್ಸಾಹಿಸಬೇಕು;

11) ಎಲ್ಲ ಭಾರತೀಯರೂ ಇದು ಪಶ್ಚಾತ್ತಾಪ, ಪ್ರಾಯಶ್ಚಿತ್ತ ಶೋಕಗಳ ಕಾಲ ಎಂದು ತಿಳಿಯಬೇಕು;

12) ಪ್ರತಿಯೊಬ್ಬ ಭಾರತೀಯನೂ ಇಂಗ್ಲಿಷರು ನಮ್ಮಿಂದಲೇ ಇದ್ದಾರೆ, ಅವರನ್ನು ದೂರಿ ಪ್ರಯೋಜನವಿಲ್ಲ. ನಾವು ನಡೆ ನುಡಿಯನ್ನು ಬದಲಾಯಿಸಿಕೊಂಡರೆ ಅವರು ಹೊರಟು ಹೋದಾರು. ಇಲ್ಲವೆ ತಾವೂ ಬದಲಿಸಿಕೊಂಡಾರು ಎಂಬುದನ್ನು ಅರಿಯಬೇಕು;

13) ಶೋಕ ಸಮಯದಲ್ಲಿ ಭೋಗವಿಲಾಸ ಕೂಡದೆಂದು, ದೀನ ದಿಸೆಯಲ್ಲಿ ಇರುವವರೆಗೆ ಸೆರೆಯಲ್ಲಿರುವುದು ದೇಶಭ್ರಷ್ಟರಾಗುವುದು ಒಳಿತು ಎಂಬುದನ್ನು ಎಲ್ಲರೂ ತಿಳಿಯಬೇಕು;

14) ನಾವು ಸೆರೆಮನೆಗೆ ಹೋದರೆ ನಮ್ಮ ಕೆಲಸ ನಿಂತು ಹೋದೀತಲ್ಲ ಎನ್ನುವುದು ಬರೀ ಭ್ರಾಂತಿ, ಎಂಬುದನ್ನು ಎಲ್ಲರೂ ತಿಳಿಯಬೇಕು;

15) ಮಾತಿಗಿಂತ ಕೃತಿ ಲೇಸೆಂದೂ, ಮನಸ್ಸಿಗೆ ಅನಿಸಿದಂತೆ ಆಡಿ ಅದರಿಂದ ಬಂದುದನ್ನೆಲ್ಲ ಅನುಭವಿಸಬೇಕೆಂದೂ, ಆಗಲೇ ನಮ್ಮ ಮಾತಿಗೆ ಪ್ರಭಾವ ಹುಟ್ಟೀತೆಂದೂ ತಿಳಿಯಬೇಕು;

16) ಕಷ್ಟವನ್ನು ಸಹಿಸಿದರೇನೇ ನಾವು ಸ್ವತಂತ್ರರಾದೇವು ಎಂಬುದನ್ನು ಅರಿಯಬೇಕು;

17) ಅಂಡಮಾನ್ ದ್ವೀಪಗಳಿಗೆ ಗಡೀಪಾರು ಮಾಡಿದ ಮಾತ್ರಕ್ಕೆ ಈ ಇಂಗ್ಲಿಷು ನಾಗರಿಕತೆಯನ್ನು ಪ್ರೋತ್ಸಾಹಿಸಿದ ಪಾಪಕ್ಕೆ ಸಾಕಷ್ಟು ಪ್ರಾಯಶ್ಚಿತ್ತವಲ್ಲ ವೆಂಬುದನ್ನು ಅರಿಯಬೇಕು;

18) ಕಷ್ಟ ಸಹನೆ ಮಾಡದೆ ಯಾವ ರಾಷ್ಟ್ರವೂ ಉನ್ನತಿ ಹೊಂದಲಿಲ್ಲವೆಂದೂ ಶಸ್ತ್ರಯುದ್ಧದಲ್ಲಿ ಕೊಲ್ಲುವುದಕ್ಕಿಂತ ಅಪಲಾಯನವೇ ಹೆಚ್ಚು ಮಹತ್ವದ್ದೆಂದೂ ಸತ್ಯಾಗ್ರಹದಲ್ಲಿಯಂತೂ ಕಷ್ಟ ಸಹನೆಯೇ ಮುಖ್ಯವೆಂದೂ ತಿಳಿಯಬೇಕು;

19) ಅವನು ಮಾಡಿದರೆ ನಾನು ಮಾಡುತ್ತೇನೆ ಎಂಬುದು ಕಳ್ಳನೆವ. ನಮಗೆ ಸರಿಯೆಂದು ತಿಳಿದುದನ್ನು ನಾವು ಮಾಡಬೇಕು. ಉಳಿದವರು ತಮಗೆ ಸರಿಯೆನಿಸಿದಾಗ ಮಾಡಿಯಾರು. ನನಗೆ ರುಚಿಯಾದುದನ್ನು ಇತರರು ಸವಿಯುವವರೆಗೆ ನಾನು ಕಾಯುವುದಿಲ್ಲ. ರಾಷ್ಟ್ರೀಯ ಪ್ರಯತ್ನ ಮಾಡುವುದೂ ಕಷ್ಟ ಸಹಿಸುವುದೂ ತನತನಗೆ ರುಚಿಯಾದುದನ್ನು ಸವಿಯುವ ಹಾಗೆ; ಪರರಿಗಂಜಿ ಅಳುತ್ತಳುತ್ತ ಕಷ್ಟ ಸಹಿಸುವುದು ಸರಿಯಲ್ಲ ಎಂಬುದನ್ನು ಎಲ್ಲರೂ ಅರಿತುಕೊಳ್ಳಬೇಕು."

**ಓದುಗ :** ಇದು ಬಹಳ ಉದ್ದವಾದ ಪಟ್ಟಿ. ಇಷ್ಟೆಲ್ಲವನ್ನೂ ಎಲ್ಲರೂ ಎಂದಿಗೆ ಮಾಡಬೇಕು?

**ಸಂಪಾದಕ :** ಅದೇ ತಪ್ಪು. ಎಲ್ಲರ ಗೊಡವೆ ನಿಮಗೆ ನನಗೆ ಏಕೆ? ಪ್ರತಿಯೊಬ್ಬನೂ ತನ್ನ ಕರ್ತವ್ಯವನ್ನು ಮಾಡಲಿ, ನನ್ನ ಕೆಲಸವನ್ನು ನಾನು ಮಾಡಿದರೆ ಇತರರ ಕೆಲಸವನ್ನು ಮಾಡಿದಂತಾಯಿತು. ಸ ಇದು ಸ್ವಾರ್ಥವಲ್ಲ ಪರಮಾರ್ಥ. ನಾನು ಮೇಲೇರಿದರೆ ತಾನೆ ಪರರನ್ನು ಮೇಲಕ್ಕೆ ಸೆಳೆದೇನು.

**ಕಟ್ಟಕಡೆಗೆ ಮತ್ತೊಮ್ಮೆ ಹೇಳುತ್ತೇನೆ:**

1) ನಿಜವಾದ ಸ್ವರಾಜ್ಯ ಎಂದರೆ ಆತ್ಮರಾಜ್ಯ ಅಥವಾ ಆತ್ಮಸಂಯಮ.

2) ಅದಕ್ಕೆ ದಾರಿ ಸತ್ಯಾಗ್ರಹ. ಆತ್ಮಬಲ ಅಥವಾ ಪ್ರೇಮಬಲ.

3) ಈ ಬಲವನ್ನು ಪ್ರಯೋಗಿಸಲು ಸರ್ವವಿಧದಲ್ಲಿಯೂ ಸರ್ವಥಾ ಸ್ವದೇಶಿ ಅಗತ್ಯ.

4) ಇಂಗ್ಲಿಷರ ಮೇಲೆ ಹಗೆಯಿಂದ ಅಥವಾ ಪ್ರತೀಕಾರ ಬುದ್ಧಿಯಿಂದ ಏನೂ ಮಾಡಬೇಕಾಗಿಲ್ಲ. ಮಾಡಬೇಕಾದುದನ್ನೆಲ್ಲ ಕರ್ತವ್ಯ ಎಂದು ಮಾಡಬೇಕು. ಒಂದು ವೇಳೆ ಇಂಗ್ಲಿಷರು ಉಪ್ಪಿನ ತೆರಿಗೆ ತೆಗೆದುಹಾಕಿದರೆ, ನಮ್ಮ ಹಣವನ್ನು ಹಿಂತಿರುಗಿ ಕೊಟ್ಟರೆ, ಭಾರತೀಯರಿಗೆ ದೊಡ್ಡ ದೊಡ್ಡ ಅಧಿಕಾರಗಳನ್ನು ಕೊಟ್ಟರೆ, ಇಂಗ್ಲಿಷ್ ಸೇನೆಯನ್ನು ಇಲ್ಲಿಂದ ತೆಗೆದುಹಾಕಿದರೆ, ಆಗಲೂ ನಾವು ಅವರ ಗಿರಣಿ ಪದಾರ್ಥಗಳನ್ನು ಉಪಯೋಗಿಸುವುದಿಲ್ಲ. ಇಂಗ್ಲಿಷ್ ಭಾಷೆಯನ್ನು ಬಳಸುವುದಿಲ್ಲ. ಅವರ ಉದ್ಯೋಗಗಳಿಗೆ ಆಶ್ರಯ ಕೊಡುವುದಿಲ್ಲ.

ಖಂಡಿತ, ಇವೆಲ್ಲವೂ ನಮಗೆ ಹಾನಿಕರ. ಆದುದರಿಂದ ನಮಗೆ ಅವು ಬೇಡ. ನನಗೆ ಇಂಗ್ಲಿಷರನ್ನು ಕಂಡರೆ ಕಿಂಚಿತ್ತೂ ಹಗೆಯಿಲ್ಲ. ಅವರ ನಾಗರಿಕತೆಗೆ ಮಾತ್ರ ನಾನು ಪೂರ್ಣ ವಿರೋಧಿ.

**ಸ್ವರಾಜ್ಯ-ಶಬ್ದಕ್ಕೆ ನಿಜವಾದ ಅರ್ಥ ತಿಳಿಯದೆ ನಾವು ಅದನ್ನು ಉಪಯೋಗಿಸಿದ್ದೇವೆ ಎನಿಸುತ್ತದೆ. ನನಗೆ ತಿಳಿದ ಮಟ್ಟಿಗೆ ನಾನು ಅದನ್ನು ತಿಳಿಸುವ ಪ್ರಯತ್ನ ಮಾಡಿದ್ದೇನೆ. ಈ ಬಗೆಯ ಸ್ವರಾಜ್ಯ ಸಂಪಾದನೆಗೆ ನನ್ನ ಬಾಳು ಮೀಸಲು. ಇದಕ್ಕೆ ನನ್ನ ಅಂತರಾತ್ಮವೇ ಸಾಕ್ಷಿ.**



God is Truth
The way to Truth
lies through Ahimsa
(non violence)
Sabarmati
13, 3, '27

M K Gandhi

# ಹಿಂದ್ ಸ್ವರಾಜ್ಯ


ಕರ್ನಾಟಕ ಗಾಂಧಿ ಸ್ಮಾರಕ ನಿಧಿ
ಗಾಂಧಿ ಭವನ, ಕುಮಾರ ಪಾರ್ಕ್ ಪಶ್ಚಿಮ,
ಬೆಂಗಳೂರು– 560 001.